# ಚಂದಮಾಮ

## ಜನವರಿ 1979



### ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೨೫

ವಾರ್ಷಿಕ ಚಂದಾ ರೂ. ೧೫.೦೦

# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

'ಬಾಲ ಸಂವತ್ಸರವೆಂದು ಪ್ರಸಿದ್ಧವಾಗಲಿರುವ ಈ ವರ್ಷದ ಈ ಸಂಚಿಕೆಯಲ್ಲಿ "ಮಕ್ಕಳ ಡೇರೆ" ಎಂಬ ಸಣ್ಣ ಕಥೆಯೊಂದಿದೆ. ಆದರಂತೆ ಪ್ರತಿಯೊಬ್ಬರಿಗೂ ಮಕ್ಕಳ ಮನಸ್ಸು ಬರುವಂತಾದರೆ ಎಷ್ಟೋ ಸಂತೋಷವಾಗಿರಬಹುದೆಂದು ಅನಿಸಬಹುದು. ಮಕ್ಕಳಿಗೆ ದೊಡ್ಡವರಿಗಿರುವಷ್ಟು ವಿರೋಧ ಭಾವವಿರದು; ಈರ್ಷ್ಯಾಸೂಯೆಗಳಿರದು. ಸುಲಭದಲ್ಲಿ ಹರ್ಷಗೊಳ್ಳುವ ಹೂ ಮನಸ್ಸು. ಅಂತಹ ಮನಸ್ಸು ಯಾರಿಗೆ ಬೇಡ ?

## ಅಮರವಾಣಿ

ಕಿಂತಯಾ ಕ್ರಿಯತೇ ಧೇನ್ವಾ
ಯಾ ನ ಸೂತೇ ನ ದುಗ್ಧದಾ?
ಕೋರ್ಥಃ ಪುತ್ರೇಣ ಜಾತೇನ
ಯೋ ನ ವಿದ್ವಾನ್ನಭಕ್ತಿಮಾನ್ ?

[ದನವು ಗೊಡ್ಡಾಗಿ ಹಾಲುಕೊಡದೇ ಹೋದರೆ ಏನು ಲಾಭ? ವಿದ್ಯೆಯೂ ವಿನಯವೂ ಇಲ್ಲದ ಮಗನು ಏತಕ್ಕೆ ? ]

ಸಂಪುಟ: ೭೨ ಜನವರಿ '೭೯ ಸಂಚಿಕೆ: ೧

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ: ೧೫-೦೦






**ಸುಧಾಕರ್ 'ಬಂಧು', ಅಜ್ಮೀರ್ (ರಾಜಾಸ್ಥಾನ್)**

**ಪ್ರ: ಈ ವೈಜ್ಞಾನಿಕ ಯುಗದಲ್ಲಿ ಚಂದ್ರನ ವಾಸ್ತವಿಕತೆಯನ್ನು ತಿಳಿದುಕೊಂಡ ಮೇಲೆ, ಅದರ ಪ್ರಭಾವವು "ಚಂದಮಾಮ"ದ ಮೇಲೆ ಎಷ್ಟರಮಟ್ಟಿಗೆ ಬಿದ್ದಿದೆ ಹೇಳುವಿರಾ ?**

ಉ: ಖಗೋಳಜ್ಞಾನ ಹುಟ್ಟಿದಂದಿನಿಂದಲೂ ಚಂದ್ರನನ್ನು ಕುರಿತು ಎಲ್ಲರಿಗೂ ಗೊತ್ತು. ಆದರೂ ಪುರಾಣಗಳಲ್ಲಿ ಚಂದ್ರನು ಮನುಷ್ಯಪಾತ್ರದಂತೆ ಆಡಿದ್ದಾನೆ. ನಮ್ಮ "ಚಂದಮಾಮ" ಎಂಬುದು ಸಂಕೇತನಾಮ ಮಾತ್ರವೇ. ಈ ಸಂಕೇತ ನಾಮಕ್ಕೂ ಅಸಲು ಚಂದ್ರನ ವಾಸ್ತವಿಕತೆಗೂ ಏನು ಸಂಬಂಧವಿದೆ ?

**ಕೆ. ಜಿ. ಸರಳಕುಮಾರಿ, ಕೆ. ಜಿ. ಹೇಮಲತ, ಕುಪ್ಪಂ (ಆಂಧ್ರ)**

**ಪ್ರ: ಚಂದ್ರನಿಗಿಂತಲೂ ನಕ್ಷತ್ರವು ಎಷ್ಟು ಪಾಲು ದೊಡ್ಡದು ? ಚಂದ್ರಮಂಡಲಕ್ಕೂ ನಕ್ಷತ್ರ ಮಂಡಲಕ್ಕೂ ಎಷ್ಟು ದೂರ ?**

ಉ: ಯಾರೋ ಅಗತ್ಯವೆನಿಸಿಮಾಡಿದ ಏರ್ಪಾಡಿನಂತೆ ಭೂಮಿಯ ಮೇಲೆ ನಮಗೆ ಸೂರ್ಯನೂ (ನಕ್ಷತ್ರ) ಚಂದ್ರನೂ ಒಂದೇ ಪ್ರಮಾಣದಲ್ಲಿ ಕಾಣುತ್ತಾರೆ. ಆದರೆ ನಿಜಕ್ಕೂ ಸೂರ್ಯನು ಚಂದ್ರನಿಗಿಂತ ೪೦೦ ಪಾಲು ಹೆಚ್ಚು ದೊಡ್ಡವನು. ಅಂದರೆ ಸೂರ್ಯನೆಂಬ ನಕ್ಷತ್ರ ಪರಿಮಾಣಕ್ಕೆ ಹೋಲಿಸಿದರೆ ಚಂದ್ರನ ಪರಿಮಾಣವು ೬೦ ಸಾವಿರ ಪಾಲಿನಲ್ಲಿ ಒಂದು ಪಾಲು. ಇಷ್ಟಲ್ಲದೆ ಸೂರ್ಯನಿಗಿಂತ ಹತ್ತು ಸಾವಿರ ಪಾಲೂ, ಲಕ್ಷ ಪಾಲೂ ಹೆಚ್ಚಾಗಿರುವ ನಕ್ಷತ್ರಗಳೂ ಆಕಾಶದಲ್ಲಿವೆಯಂತೆ.

ಚಂದ್ರನು ನಮಗೆ ೨೪೦ ಸಾವಿರ ಮೈಲು ದೂರದಲ್ಲಿದ್ದಾನೆ. ಕೆಲಮಂದಿ ಶಾಸ್ತ್ರವೇತ್ತರು ಚಂದ್ರನನ್ನು ಭೂಮಿಗೆ ಉಪಗ್ರಹವೆಂದು ಹೇಳದೆ ಭೂಮಿಯನ್ನೂ ಚಂದ್ರನನ್ನೂ ಸೂರ್ಯನ ಜಂಟಿಗ್ರಹಗಳೆಂದು ಭಾವಿಸುತ್ತಾರೆ. ಆದುದರಿಂದ ಭೂಮಿಯದೂ ಚಂದ್ರನದೂ ಒಂದೇ ಮಂಡಲವೆನ್ನಬಹುದು. ನಕ್ಷತ್ರಗಳು ತುಂಬಾ ದೂರ ದೂರವಾಗಿರುತ್ತವೆ. ಸೂರ್ಯನು ನಮಗೆ ಸನ್ನಿಹಿತ ನಕ್ಷತ್ರ. ಭೂಮಿಯೂ ಚಂದ್ರನೂ ಸೂರ್ಯನ ವಾತಾವರಣದಲ್ಲೇ ಇವೆ. ಸೂರ್ಯನ ತರುವಾಯ ನಮಗೆ ಹತ್ತಿರದ ನಕ್ಷತ್ರ ೨೫ ಲಕ್ಷ ಕೋಟಿ ಮೈಲು ದೂರದಲ್ಲಿ. ಸೂರ್ಯನಿಗೆ ೨೮ ಲಕ್ಷ ಪಾಲು ಹೆಚ್ಚಿನ ದೂರದಲ್ಲಿದೆ. ನಕ್ಷತ್ರಮಂಡಲವು ಸರ್ವವ್ಯಾಪ್ತವಾದುದು.




ಶಿಶಿ

ರಾಜನ ಪ್ರಶ್ನೆಗೆ ಕುಂಬಾರನು, "ಮಹಾಪ್ರಭುಗಳೇ, ನನಗೆ ಯುಧಿಷ್ಠಿರನೆಂದು ಹೆಸರು. ಕುಂಬಾರ ಕುಲದಲ್ಲಿ ಹುಟ್ಟಿದವನು. ಹಣೆಯಲ್ಲಿರುವ ಈ ಗಾಯವು ಆಯುಧದ ಪೆಟ್ಟಿನಿಂದ ಉಂಟಾದುದಲ್ಲ. ಒಂದುಸಾರಿ ನಾನು ವಿಪರೀತವಾಗಿ ಕಳ್ಳು ಕುಡಿದು ಜೋಲಿಹೊಡೆದು ಗಟ್ಟಿಯಾಗಿ ಹರಿತವಾದ ಮಡಿಕೆಯ ಮೇಲೆ ಬಿದ್ದೆ. ಆಗ ಉಂಟಾದ ಗಾಯದ ಮಚ್ಚೆ ಇದು." ಎಂದನು.

ರಾಜನು ಮುಖ ಚಿಟ್ಟಿಸಿ "ಛೆಛೆ! ನಾನೆಂತಹ ಅವಿವೇಕಿ! ಇವನ ಯೋಧನಂಥ ರೀತಿಯನ್ನೂ, ಭಯಂಕರ ಗಾಯದ ಮಚ್ಚೆಯನ್ನೂ ನೋಡಿ ಮೋಸಹೋದೆನಲ್ಲ!" ಎಂದುಕೊಂಡು, "ನಿನಗೆ ಸರಿಹೋಗುವ ಕೆಲಸ ಇದಲ್ಲ. ನೀನು ನಮ್ಮ ಸೇವೆಗೆ ಬೇಡ. ನಿನಗೆ ತಕ್ಕ ಕೆಲಸ ಎಲ್ಲಿದೆಯೋ ಹುಡುಕಲು ಈಗಲೇ ಇಲ್ಲಿಂದ ಹೊರಟುಹೋಗು" ಎಂದನು.

ಆಗ ಕುಂಬಾರ, "ಪ್ರಭುಗಳೇ! ನನ್ನನ್ನು ಹೋಗೆಂದು ಮಾತ್ರ ಹೇಳಬೇಡಿ. ಯುದ್ಧದಲ್ಲಿ ನನ್ನ ಧೈರ್ಯವನ್ನೂ ಸಾಮರ್ಥ್ಯವನ್ನೂ ಪರೀಕ್ಷಿಸಿ ನೋಡಿರಿ. ನಿಮ್ಮನ್ನು ಮೆಚ್ಚಿಸುವೆನೆಂಬ ಧೈರ್ಯ ನನಗಿದೆ. ನನ್ನ ಯೋಗ್ಯತೆಯ ಪರೀಕ್ಷೆಗೆ ಇದೊಂದು ಒಳ್ಳೆಯ ಸಂದರ್ಭ ಪ್ರಭುಗಳೇ!" ಎಂದನು.

"ನೀನು ಶಕ್ತಿಶಾಲಿಯಾದರೂ ನಿನ್ನನ್ನು ಹೊರಡಿಸದೆ ಸಾಧ್ಯವಿಲ್ಲ. ಹಿಂದಿನ ಕಥೆಯಲ್ಲಿ ಹೇಳಿದಂತೆ, 'ಎಲೋ ಕಂದಾ, ನೀನು ಧೈರ್ಯಶಾಲಿಯಾದರೂ ಎಲ್ಲಾ ಶಾಸ್ತ್ರಗಳನ್ನೂ ಮಗುಚಿಮಗುಚಿ ಓದಿದವನಾದರೂ, ಸುಂದರನಾಗಿದ್ದರೂ ನಿಮ್ಮ ವಂಶದಲ್ಲಿ ಹುಟ್ಟಿದವನು ಆನೆಯನ್ನು ಕೊಲ್ಲಲಾರ' ಹೋಗಪ್ಪಾ!" ಎಂದನು ರಾಜ.

"ತಾವು ಹೇಳುವ ಆ ಕಥೆ ಎಂಥದೋ? ಅಪ್ಪಣೆ ಕೊಡುವಿರಾ?" ಎಂದು ಕುಂಬಾರನು ಕೇಳಲು, ರಾಜನು ಹೀಗೆಂದನು:

### ಸಿಂಹಿಣಿ ಬೆಳೆಸಿದ ನರಿ

ಒಂದು ಅರಣ್ಯದಲ್ಲಿ ಹೆಣ್ಣುಸಿಂಹವೂ ಗಂಡುಸಿಂಹವೂ ಜತೆಯಾಗಿದ್ದುವು. ಹೆಣ್ಣುಸಿಂಹವು ಎರಡು ಮರಿಗಳನ್ನು ಈನಿತು. ಆಗ ಹೆಣ್ಣು ಸಿಂಹಕ್ಕೆ ಬೇಟೆಗೆ ಹೋಗಲಾಗಲಿಲ್ಲ. ಗಂಡುಸಿಂಹವೇ ದಿನಾ ಬೇಟೆಗೆ



ಹೋಗಿ ಕಾಡುಕಾಡು ಅಲೆದು ಯಾವುದೋ ಪ್ರಾಣಿಯನ್ನು ಹಿಡಿದುಕೊಂಡು ತಂದು ಹೆಣ್ಣುಸಿಂಹಕ್ಕೆ ಆಹಾರವಾಗಿ ಕೊಡುತ್ತಿತ್ತು.

ಒಂದು ದಿನ ಗಂಡುಸಿಂಹವು ಮೃಗಗಳನ್ನು ಹುಡುಕುತ್ತಾ ಕತ್ತಲೆಯಾಗುವವರೆಗೂ ಕಾಡು ಪೂರಾ ತಿರುಗಿದರೂ ಒಂದು ಪ್ರಾಣಿಯೂ ಸಿಗದೇ ಹೋಯಿತು.

ಅದು ಬೇಸರದಿಂದ ತನ್ನ ಗುಹೆಗೆ ಹಿಂದಿರುಗಿ ಬರುತ್ತಿರುವಾಗ ದಾರಿಯಲ್ಲಿ ಅದಕ್ಕೊಂದು ನರಿಯ ಮರಿ ಕಾಣಿಸಿತು. ಅದು ಇಬ್ಬರ ಹಸಿವೆಗಂತೂ ಸಾಲದು. ಎಳೇಮರಿಯಾದ ಅದನ್ನು ನೋಡಿ ಸಿಂಹವು ಕನಿಕರಗೊಂಡು ಅದನ್ನು ಕೊಲ್ಲದೆ, ಬಾಯಿಯಲ್ಲಿ ಕಚ್ಚಿಕೊಂಡು ಹೋಗಿ ಹೆಣ್ಣುಸಿಂಹಕ್ಕೆ ಒಪ್ಪಿಸಿತು.

"ನನಗೆ ತಿನ್ನಲು ಏನೂ ತರಲಿಲ್ಲವೇ ಪ್ರಿಯಾ ?" ಎಂದು ಹೆಣ್ಣುಸಿಂಹ ಸಂದೇಹದಿಂದ ಕೇಳಿತು. "ಪ್ರಿಯಳೇ, ನನಗೆ ಈ ನರಿಮರಿಯ ಹೊರತು ಈ ದಿನ ಬೇರೆ ಯಾವ ಪ್ರಾಣಿಯೂ ಸಿಗಲಿಲ್ಲ. ಇದು ಕೂಡಾ ನಮ್ಮ ಹಾಗೆ ನಖಗಳಿರುವ ಮಾಂಸಾಹಾರಿ ಪ್ರಾಣಿಯೇ. ತೀರ ಎಳೇಮರಿ. ಅದಕ್ಕೇ ನಾನಿದನ್ನು ಕೊಲ್ಲಲಿಲ್ಲ. ಹಸಿವೆಯಿಂದ ಪ್ರಾಣವೇ ಹೋಗುವುದಾದರೂ ಸ್ತ್ರೀಯನ್ನೂ, ಲಿಂಗಧಾರಿಯನ್ನೂ, ಬ್ರಾಹ್ಮಣನನ್ನೂ, ಮಕ್ಕಳನ್ನೂ ಮುಖ್ಯವಾಗಿ ತನ್ನನ್ನು ಆಶ್ರಯಿಸಿದವರನ್ನೂ ಕೊಲ್ಲಬಾರದೆಂದು ಹೇಳುತ್ತಾರೆ. ಆದರೆ ಈಗ ನೀನು ಬಾಣಂತೀ ರೋಗದವಳು. ಆರೋಗ್ಯಕ್ಕಾಗಿ ಆಹಾರ ತೆಗೆದು ಕೊಳ್ಳಬೇಕಾದ ಅಗತ್ಯವಿರುವುದರಿಂದ ಈ ನರಿಯ ಮರಿಯನ್ನು ಕೊಂದು ತಿಂದುಬಿಡು. ನನಗೆ ಈ ದಿನ ಉಪವಾಸವಾದರೂ ಚಿಂತೆಯಿಲ್ಲ. ನಾಳೆ ಬೇರೆ ಕಾಡಿಗಾದರೂ ಹೋಗಿ ಇದಕ್ಕಿಂತ ಒಳ್ಳೇ ಪ್ರಾಣಿಯನ್ನು ತರುತ್ತೇನೆ" ಎಂದಿತು ಸಿಂಹ.

"ಪ್ರಿಯನೇ, ಎಳೇ ಮರಿ ಅಂತ ನೀನೇ ಕೊಲ್ಲದೆ ಬಿಟ್ಟಿರುವಾಗ ಹೆಣ್ಣಾಗಿ ಮಾತೃ ಮೂರ್ತಿಯಾಗಿದ್ದು ಕೇವಲ ನನ್ನ ಹೊಟ್ಟೆ ತುಂಬಿಸಲಿಕ್ಕಾಗಿ ಇದನ್ನು ಹೇಗೆ ಕೊಂದೇನು ? ಅವಸಾನಕಾಲದಲ್ಲಿ ಕೂಡಾ ನಿಷಿದ್ಧವಾದ ಕಾರ್ಯ ಮಾಡಬಾರದೆಂದೂ, ಕರ್ತವ್ಯ ಬಿಡಬಾರದೆಂದೂ ಧರ್ಮಶಾಸ್ತ್ರಗಳು ಹೇಳುತ್ತವಲ್ಲವೆ ? ಆದುದರಿಂದ ನಾನು ಈ ನರಿಯ ಮರಿಯನ್ನು ನನ್ನ ಮೂರನೇ ಮಗನ ಹಾಗೆ ನೋಡಿಕೊಳ್ಳುತ್ತೇನೆ. ಒಂದುದಿನ ಉಪವಾಸವಿರಲು ನನಗೂ ಸಾಧ್ಯವಿದೆ." ಎಂದು ಹೆಣ್ಣು ಸಿಂಹವು ನರಿಯ ಮರಿಯನ್ನು ತನ್ನ ಹಾಲು ಕುಡಿಸಲು ಎಳೆದು ಅಪ್ಪಿಕೊಂಡಿತು.

ಬಲವರ್ಧಕವಾದ ಸಿಂಹದ ಹಾಲು ಕುಡಿದು ನರಿಯ ಮರಿ ಬೆಳೆಯುತ್ತ ಬಹಳ ದೊಡ್ಡದಾಗಿ ಬಲಿಷ್ಠವಾಗಿ ತಯಾರಾಯಿತು. ಸಿಂಹದ ಮರಿಗಳೂ ನರಿಯ ಮರಿಯೂ ತಮ್ಮಲ್ಲಿರುವ ಜಾತಿ ಭೇದವನ್ನು ಅರಿಯದೆ ಮೂರು ಅಣ್ಣತಮ್ಮಂದಿರಂತೆ

ಬೆಳೆದು ಕಲೆತು ಕೂಡಿ ಆಡಿಕೊಳ್ಳುತ್ತಿದ್ದುವು. ಹೀಗಿರಲು ಒಂದು ದಿನ ಅವುಗಳು ಮೂರೂ ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ಅವುಗಳಿಗೆ ಒಂದು ಕಾಡಾನೆಯ ದರ್ಶನವಾಯಿತು. ಅದನ್ನು ನೋಡಿದ ಕೂಡಲೇ ಸಿಂಹದ ಮಕ್ಕಳು ರೋಷಗೊಂಡು ಅದರ ಮೇಲೆ ಹಾರಲು ನೋಡಿದುವು.

ಆಗ ನರಿ ಅವುಗಳೊಂದಿಗೆ, "ಬೇಡ ಬೇಡ್ರೀ! ಆದರ ತಂಟೆಗೆ ಹೋಗಬೇಡಿ! ಅದು ಜಾತಿ ಶತ್ರು! ಮಹಾಬಲದ್ದು!" ಎಂದು ಎಚ್ಚರಿಸಿ, ಸಿಂಹದ ನಿವಾಸದ ಕಡೆಗೆ ಓಡಿಹೋಯಿತು.

ಅದನ್ನು ನೋಡಿ ಸಿಂಹದ ಮಕ್ಕಳು ಕೂಡಾ ತಮ್ಮ ಅಣ್ಣನ ಓಟದ ವೈಖರಿಯಿಂದಾಗಿ ಉತ್ಸಾಹ ಕುಂದಿ ಆನೆಯನ್ನು ಬಿಟ್ಟು ಸರಿದುವು. ಶಕ್ತಿವಂತನಾದ ನಾಯಕನು ತನ್ನ ಧೈರ್ಯದಿಂದ ಒಂದು ಸೈನ್ಯವನ್ನೇ ಉತ್ತೇಜನಗೊಳಿಸಬಲ್ಲನು. ಆದರೆ ಅವನು ಪುಕ್ಕಲನಾಗಿ ಎಲ್ಲರಿಗಿಂತ ಮೊದಲೇ ಓಡಿಬಿಟ್ಟರೆ ಸೇನೆಯ ಧೈರ್ಯವೆಲ್ಲಾ ಸೋರಿಹೋಗಿ ಪಲಾಯನ ಮಾಡಿಬಿಡುತ್ತದೆ! ನರಿಯ ವರ್ತನೆಯಿಂದಾಗಿ ಸಿಂಹದ ಮರಿಗಳೆರಡೂ ಮನೆಗೆ ಹೋಗಿ ತಮ್ಮ ತಾಯಿ ತಂದೆಯರೊಂದಿಗೆ ಅಣ್ಣನ ಪುಕ್ಕಲುತನವನ್ನೂ, ಅದು ಆನೆಯನ್ನು ನೋಡಿ ಹೆದರಿ ಓಡಿದುದನ್ನೂ ನಗುತ್ತಾ ಹೇಳಿದುವು.

ಆಗ ಅಲ್ಲಿದ್ದ ನರಿಮಗನಿಗೆ ಬಹಳ ಸಿಟ್ಟು ಬಂತು. ಅದರ ಕಣ್ಣುಗಳು ಕೆಂಪು ಕೆಂಪಾದುವು. ತುಟಿಗಳು ನಡುಗಿದುವು. ಅದು ತನ್ನ ತಮ್ಮಂದಿರನ್ನು ಕೆಟ್ಟ ಕೆಟ್ಟ ಮಾತುಗಳಿಂದ ಕಾಡೆಲ್ಲಾ ಮಾರ್ಮೊಳಗುವಂತೆ ಬಯ್ಯಲು ತೊಡಗಿತು.

ಅದರ ಸಿಡುಕಾಟದ ಪ್ರವರ್ತನೆಯಿಂದ ಸಿಂಹದ ಮಕ್ಕಳಿಗೂ ಸಿಟ್ಟು ಬರತೊಡಗಿತು. ಅದನ್ನು ನೋಡಿ ಸಿಂಹಿಣಿ, ತನ್ನ ಮಕ್ಕಳು ನರಿಮಗನನ್ನು ಕೊಲ್ಲುತ್ತವೆಂದುಕೊಂಡು, ತಾನು ಹಾಲು ಕುಡಿಸಿ ಬೆಳೆಸಿದ ನರಿಯನ್ನು ಕಾಪಾಡಲಿಕ್ಕಾಗಿ ಅದರೊಂದಿಗೆ, "ಅಪ್ಪಾ, ಇವರನ್ನು ಹೀಗೆಲ್ಲಾ ಅನ್ನಬಾರದು. ಇವರು ನಿನ್ನ ತಮ್ಮಂದಿರಲ್ಲವೇ ?" ಎಂದಿತು.



ಈ ಮೃದುವಾದ ಮಾತಿಗೆ ನರಿ ನೂರು ಪಾಲು ಸಿಟ್ಟಿನಿಂದ, "ಇವರಿಗೆ ನಾನು ಧೈರ್ಯದಲ್ಲಾಗಲೀ, ರೂಪುರೇಖೆಗಳಲ್ಲಾಗಲೀ ಯಾವುದರಲ್ಲಿ ಕಡಮೆಯಾಗಿದ್ದೇನೆಂದು ಹೀಗೆ ಎಟಕರಿಸುತ್ತಾರೆ? ನಾನು ನನ್ನ ಆತ್ಮ ಗೌರವ ಕಾಪಾಡಲಿಕ್ಕಾಗಿ ಇವರನ್ನು ಕೊಲ್ಲದೆ ಬಿಡುವುದಿಲ್ಲ!" ಎಂದಿತು.

ಹೆಣ್ಣು ಸಿಂಹವು ಬರುವ ನಗುವನ್ನು ತಡೆದು ಕೊಳ್ಳುತ್ತ, "ಅಪ್ಪಾ, ನೀನು ಧೈರ್ಯಶಾಲಿಯಾಗಿರಬಹುದು. ಓದಿಕೊಂಡವನಾಗಿಯೂ ಇರಬಹುದು, ಆದರೆ ನಿನ್ನ ವಂಶದಲ್ಲಿ ಹುಟ್ಟಿದವರಾರೂ ಆನೆಯನ್ನು ಕೊಲ್ಲಲಾರರು, ಆದುದರಿಂದ ನನ್ನ ಮಾತು ಮನಸ್ಸು ಕೊಟ್ಟು ಕೇಳು. ನೀನು ಹುಟ್ಟಿನಲ್ಲಿ ನರಿ. ನಿನ್ನನ್ನು ನೋಡಿ ಕನಿಕರ ಪಟ್ಟು ನನ್ನ ಹಾಲು ಕುಡಿಸಿ ಬೆಳೆಸಿದೆ. ನನ್ನ ಮಕ್ಕಳು ಇನ್ನೂ ಚಿಕ್ಕವರಾದುದರಿಂದ ನೀನು ನರಿ ಎಂಬುದನ್ನು ಅವರಿನ್ನೂ ತಿಳಿದಿಲ್ಲ. ಆದುದರಿಂದ ನೀನು ಇಲ್ಲಿಂದ ಹೊರಟು ಹೋಗಿ ನಿನ್ನ ನರಿಗಳ ಗುಂಪಿನಲ್ಲಿ ಸೇರಿ ಬದುಕಿಕೊಂಡಿರು. ಅದೇ ಒಳ್ಳೇದು. ಇಲ್ಲದಿದ್ದರೆ ನನ್ನ ಮಕ್ಕಳಿಂದ ಬೇಗದಲ್ಲೇ ನಿನ್ನ ಪ್ರಾಣಕ್ಕೆ ಹಾನಿ ಬಂದೀತು!" ಎಂದು ಹೇಳಿತು. ಈ ಮಾತು ಕೇಳಿ ನರಿ ಪ್ರಾಣಭೀತಿಯಿಂದ ನಡುಗುತ್ತ, ಅಲ್ಲಿಂದ ಓಡಿ ಹೋಗಿ ನರಿಗಳ ಮಧ್ಯದಲ್ಲಿ ಸೇರಿಕೊಂಡಿತು.

ರಾಜನು ಈ ಕಥೆಯನ್ನು ಹೇಳಿ ಕುಂಬಾರನೊಂದಿಗೆ, "ಈಗ ಗೊತ್ತಾಯಿತೇ? ಯಾರೊಡನೆಯೂ ಮಾತಾಡಬೇಡ. ನೀನೊಬ್ಬ ಕುಂಬಾರನೆಂದು ನಮ್ಮ ಸೈನಿಕರಿಗೆ ಗೊತ್ತಾಗುವುದಕ್ಕೆ ಮೊದಲೇ ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ನಿನ್ನನ್ನು ಅವರೆಲ್ಲ ಹಾಸ್ಯ ಮಾಡುತ್ತಲೇ ಚಿತ್ರಹಿಂಸೆ ಮಾಡಿ ಕೊಂದಾರು!" ಎಂದನು. ಕುಂಬಾರನು ಮತ್ತೇನೂ ಹೇಳದೆ ಕೂಡಲೇ ಅಲ್ಲಿಂದ ಹೊರಟುಹೋದನು.

ಕೋತಿ ಈ ಕಥೆಯನ್ನು ಮೊಸಳೆಗೆ ಹೇಳಿ, "ಗೊತ್ತಾಯಿತೇ ಮೂರ್ಖನೇ! ನಿನ್ನ ಹೆಂಡತಿಗಾಗಿ ನೀನು ಮಿತ್ರ ದ್ರೋಹಕ್ಕೆ ತಲೆ ಹಾಕಿ, ಅವಳ ಪ್ರೇಮವನ್ನೂ, ಕೃತಜ್ಞತೆಯನ್ನೂ ಸಂಪಾದಿಸ ಬೇಕೆಂದಿರುವಿಯಲ್ಲವೇ? ಆದರೆ ಹಿಂದೆ ನಡೆದ ಒಂದು ಕಥೆಯಲ್ಲಿ ಬ್ರಾಹ್ಮಣನ ಹೆಂಡತಿಯೊಬ್ಬಳು ಒಬ್ಬ ಕುಂಟ ಭಡವನಿಗಾಗಿ ತನ್ನವರನ್ನೆಲ್ಲಾ ಬಿಟ್ಟು, ತನ್ನ ಅರ್ಧಾಯುಷ್ಯವನ್ನೇ ತನಗೆ ಧಾರೆಯೆರೆದ ಗಂಡನನ್ನೇ ಕೊಲ್ಲಲು ಸಿದ್ಧಳಾದಳಲ್ಲಾ? ಅಂಥ ಹೆಣ್ಣಿನ ಸಂತೋಷಕ್ಕಾಗಿ ನೀನು ಇಂಥ ದ್ರೋಹ ಮಾಡುವುದೇ, ನಿನಗೆ ಯಾವ ನರಕ ಕಾದಿದೆಯೋ? ಛೀ ಛೀ!" ಎಂದಿತು ನರಿ.

"ಅದು ಯಾವ ಹೆಣ್ಣಿನ ಕಥೆ?" ಎಂದು ಮೊಸಳೆ ಕೇಳಿದುದಕ್ಕೆ ಕೋತಿ ಹೀಗೆ ಹೇಳತೊಡಗಿತು.





# ಬಯಲಾದ ಮಾಯೆ

**ಮ**ತ್ತೆ ಮಾಯವಾಗಿ ಹೋದ ಬೇತಾಳದ ಹಿಂದೆಯೇ ರಾಜಾತ್ರಿವಿಕ್ರಮನೂ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಆವೇಶಿತವಾಗಿದ್ದ ಬೇತಾಳವು ಮಾತಾಡಲು ತೊಡಗಿ, ಎಲೈ ಮಹಾರಾಜನೇ, ನೀನು ಈ ಶವವನ್ನು ಹೊತ್ತುಕೊಂಡು ಯಾವ ಮಹಾಕಾರ್ಯ ಸಾಧಿಸಲು ಹೊರಟಿರುವಿಯೋ ನಾನರಿಯೆ. ಒಂದುವೇಳೆ ನಿನ್ನ ಸಾಧನೆ ಒಳ್ಳೆಯದಾಗಿಲ್ಲದಿದ್ದರೆ ಸಾಧ್ಯತೆಗಳು ಕೆಡುತ್ತವೆ. ಇದಕ್ಕೆ ಉದಾಹರಣೆಯಾಗಿ ನಿನಗೆ ಧರ್ಮಯ್ಯನ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಹೇಳಿ ಹೀಗೆ ಕಥೆಯನ್ನು ಪ್ರಾರಂಭಿಸಿತು:

ಪೂರ್ವಕಾಲದಲ್ಲಿ ದೊಡ್ಡದೊಂದು ಮಹಾನಗರದಲ್ಲಿ ಮೇಲಿಂದ ಮೇಲೆ ಕಳ್ಳತನವಾಗುತ್ತಿದ್ದಿತು. ಇಬ್ಬರು ಕಳ್ಳರಿಗೆ ಅದೇ ಕೆಲಸ. ಅವರಲ್ಲಿ ಒಬ್ಬನ ಹೆಸರು ಧರ್ಮಯ್ಯ. ಇನ್ನೊಬ್ಬ ಗಂಗಯ್ಯ. ಇವ

ಬೇತಾಳ ಕಥೆಗಳು



ರಿಬ್ಬರೂ ಕೂಡಿ ದೊಡ್ಡದೊಡ್ಡ ಕಳ್ಳತನಗಳಿಂದ ಹೇರಳವಾಗಿ ಧನವನ್ನು ಸಂಪಾದಿಸುತ್ತಿದ್ದರು. ಇಬ್ಬರೊಳಗೆ ಭಾಗ ಕೊಡುವ ಒಪ್ಪಂದವೂ ಆಗಿತ್ತು.

ಇಬ್ಬರೂ ಒಟ್ಟಿಗೆ ಕಳ್ಳತನ ಮಾಡಿ ಹಂಚಿಕೊಳ್ಳುವವರಾದರೂ, ಗಂಗಯ್ಯನು ತನ್ನ ಪಾಲಿನ ಧನವನ್ನು ಕೂಡ ಹಾಕಿ ಸುಖ ಭೋಗಗಳನ್ನು ಅನುಭವಿಸುತ್ತಿದ್ದನು. ಧರ್ಮಯ್ಯ ತನ್ನ ಪಾಲಿನ ಧನದಿಂದ ಒಂದು ಧರ್ಮಛತ್ರವನ್ನು ಸ್ಥಾಪಿಸಿ ಬಡಬಗ್ಗರಿಗೆ ನಿರಂತರ ಅನ್ನದಾನ ನಡೆಯುವ ಏರ್ಪಾಡು ಮಾಡಿ, ಸಾಧುವಿನ ವೇಷದಲ್ಲೇ ಇರುತ್ತಿದ್ದನು.

ಈ ಸಾಧುವಿನ ಕೀರ್ತಿ ದೇಶದೊಳಗಿನ ಎಲ್ಲರ ಬಾಯಿಯಲ್ಲಿಯೂ ವ್ಯಾಪಿಸಿತು. ಆ ಧರ್ಮಛತ್ರದ ಸಂಗತಿ ಮಹಾರಾಜನ ಕಿವಿಗೂ ಮುಟ್ಟಿತು. ಅಂಥವನನ್ನು ಗೌರವಿಸಬೇಕಾದುದು ತನ್ನ ಕರ್ತವ್ಯವೆಂದುಕೊಂಡು ರಾಜನು ಆ ಸಾಧುವನ್ನು ತನ್ನ ಸಭೆಗೆ ಕರೆಯಿಸಿ, ಹೊಗಳಿ, ಅವನಿಗೆ "ಧರ್ಮದಾತ" ಎಂಬ ಬಿರುದನ್ನು ಕೂಡಾ ಕೊಟ್ಟನು. ಇಷ್ಟು ಗೌರವ ಪಡೆದ ಈ ಧರ್ಮದಾತನು ದೊಡ್ಡ ಕಳ್ಳನೆಂಬುದು ಯಾರಿಗೂ ಗೊತ್ತಾಗಲಿಲ್ಲ. ಅವನು ತನ್ನ ಜತೆಗಾರನೆಂಬ ಗುಟ್ಟನ್ನು ಗಂಗಯ್ಯನೂ ಬಹಿರಂಗಪಡಿಸಲಿಲ್ಲ. ಅವರವರ ಕೆಲಸ ಅವರವರು ಮಾಡಿಕೊಂಡಿದ್ದರು.

ರಾಜನಿಗೆ ಮಾತ್ರ ಪದೇಪದೇ ಬರುವ ಕಳ್ಳತನಗಳ ದೂರುಗಳಿಂದ ಚಿಂತೆ ಹಿಡಿಯಿತು. ಅವರಿಬ್ಬರೂ ಕೂಡಿ ಮಾಡುವ ಕಳ್ಳತನಗಳು ರಾಜನಿಗೆ ದೊಡ್ಡ ಸಮಸ್ಯೆಯಾಯಿತು. ಕಳ್ಳರನ್ನು ಹಿಡಿಯುವ ರಾಜನ ಪ್ರಯತ್ನಗಳೆಲ್ಲ ವಿಫಲವಾದುವು. ಕಡೆಗೆ ರಾಜನು ಕಳ್ಳರ ಇರುವಿಕೆಯನ್ನು ತಿಳಿಸಿದವರಿಗೆ ಒಂದು ಸಾವಿರ ಚಿನ್ನದ ನಾಣ್ಯಗಳನ್ನು ಕೊಡುವೆನೆಂದು ಡಂಗುರ ಸಾರಿಸಿದನು.

ಈ ಡಂಗುರದ ಸುದ್ದಿಯನ್ನು ಕೇಳಿದ ಮೇಲೆ ಗಂಗಯ್ಯನಿಗೆ ಒಂದು ಆಲೋಚನೆ ಬಂದಿತು. ತಾನು ರಾಜನ ಬಳಿಗೆ ಹೋಗಿ ಧರ್ಮಯ್ಯನನ್ನು ಹಿಡಿಯುವ ಉಪಾಯ ಹೇಳಿಬಿಟ್ಟರೆ ತನಗೆ ಸಾವಿರ ಚಿನ್ನದ ನಾಣ್ಯಗಳು ಸಿಗುವುದು ಮಾತ್ರವಲ್ಲ, ಇನ್ನು ಮೇಲೆ ತಾನು ಮಾಡಿದ ಕಳ್ಳತನಗಳಲ್ಲಿ ಧರ್ಮಯ್ಯನಿಗೆ ಪಾಲು ಕೊಡುವ ಅಗತ್ಯವೂ ತಪ್ಪುತ್ತದೆ.

ಗಂಗಯ್ಯ ನೆಟ್ಟಗೆ ರಾಜನ ಬಳಿಗೆ ಹೋಗಿ, ಕಳ್ಳತನ ಮಾಡುವವನು ಧರ್ಮಯ್ಯನೆಂದು ಹೇಳಿ, ಅವನನ್ನು ಹಿಡಿಯಬಹುದಾದ ಮನೆಯ ಗುರುತನ್ನೂ, ವೇಳೆಯನ್ನೂ ಹೇಳಿದನು. ಧರ್ಮಯ್ಯನು ಸಾಧುವೇಷಬಿಟ್ಟು, ಕಳ್ಳತನಕ್ಕೆ ಹೊರಡುವ ಸಿದ್ಧತೆಯಲ್ಲಿರುವಾಗ ಹಿಡಿಯಲ್ಪಟ್ಟು ರಾಜನ ಬಳಿಗೆ ತರಲ್ಪಟ್ಟನು. ವಿಚಾರಿಸಿದಾಗ ಧರ್ಮಯ್ಯ ತಾನು ಕಳ್ಳನೆಂಬುದನ್ನು ಒಪ್ಪಿಕೊಂಡು, ಕದ್ದುದನ್ನೆಲ್ಲಾ ಆಗಿಂದಾಗಲೇ ಖರ್ಚು ಮಾಡುತ್ತೇನೆಂತಲೂ ಹೇಳಿದನು. ರಾಜನು ಅವನ ವಿಚಾರಣೆಗೆ ಒಂದು

ದಿನವನ್ನು ಗೊತ್ತುಮಾಡಿ, ಅದು ವರೆಗೆ ಅವನನ್ನು ಕಾರಾಗೃಹದಲ್ಲಿಡುವಂತೆ ಆಜ್ಞೆಮಾಡಿದನು.

ಆದಾದ ಒಂದೆರಡು ದಿನಗಳಲ್ಲಿ ಧರ್ಮಛತ್ರ ನಡೆಸಿಕೊಂಡಿದ್ದ ಸಾಧು ಕಾಣೆಯಾಗಿಹೋಗಿದ್ದಾನೆಂದು ಗೊತ್ತಾಯಿತು. ಅದೂ ಅಲ್ಲದೆ ಆ ಧರ್ಮಛತ್ರದಲ್ಲಿ ನಡೆಯುವ ದಾನಧರ್ಮಗಳೂ ನಿಂತುಹೋದುವಂತೆ. ಈ ಸಮಾಚಾರ ತಿಳಿದ ಕೂಡಲೇ ರಾಜನು ಆ ಧರ್ಮ ಛತ್ರದಲ್ಲಿ ಎಂದಿನಂತೆ ಅನ್ನದಾನವು ನಿರ್ವಿಘ್ನವಾಗಿ ನಡೆಯುವಂತೆ ತಕ್ಕ ಏರ್ಪಾಡುಗಳನ್ನು ಕೂಡಲೇ ಮಾಡಿಸಿದನು.

ಇದರ ಹಿಂದೆಯೇ ಇನ್ನೊಂದು ಅಪಜಯದ ಸಂಗತಿಯೂ ರಾಜನಿಗೆ ಗೊತ್ತಾಯಿತು. ಕಳ್ಳನಾದ ಧರ್ಮಯ್ಯ ಕಾರಾಗೃಹದಲ್ಲಿದ್ದರೂ ಅಲ್ಲಲ್ಲಿ ಕಳ್ಳತನ ಗಳು ನಡೆಯುತ್ತಲೇ ಇದ್ದುವು. ಇದು ಗೊತ್ತಾದ ಕೂಡಲೇ ರಾಜನು ಗಂಗಯ್ಯನನ್ನು ತನ್ನ ಬಳಿಗೆ ಕರೆಯಿಸಿ, "ನೀನು ಹೇಳಿದಂತೆ ಧರ್ಮಯ್ಯನನ್ನು ಕಾರಾಗೃಹದಲ್ಲಿಡಿಸಿದ್ದೇನೆ. ಅವನ ವಿಚಾರಣೆಯ ಸಮಯದಲ್ಲಿ ಅವನ ಸಂಗತಿಯನ್ನು ಹೇಳಿದವನಾದ ನಿನ್ನ ಸಾಕ್ಷಿಯೂ ಅಗತ್ಯವಾಗಿದೆ. ಅದು ವರೆಗೆ ನೀನು ಕೂಡಾ ಖೈದಿನಲ್ಲಿರಬೇಕು. ಧರ್ಮಯ್ಯನ ವಿಚಾರಣೆ ಮುಗಿದು, ಅವನಿಗೆ ಶಿಕ್ಷೆಬಿದ್ದ ಮೇಲೆ, ನಿನಗೆ ಸಾವಿರ ಚಿನ್ನದ ನಾಣ್ಯಗಳನ್ನು ಕೊಟ್ಟು ಬಿಡುಗಡೆ ಮಾಡಲಾಗುತ್ತೆ" ಎಂದನು. ರಾಜನು ಹೇಳಿದ ಮಾತಿಗೆ ಇದಿರಾಡಲಾಗದೆ, ಗಂಗಯ್ಯನು ಕಾರಾಗೃಹದಲ್ಲಿ ಸೇರಿದನು.

ಆದರೆ ಎಷ್ಟುದಿನ ಕಳೆದರೂ ಧರ್ಮಯ್ಯನ ವಿಚಾರಣೆ ನಡೆಯಲೇ ಇಲ್ಲ. ಎಲ್ಲಿಯೂ ಕಳ್ಳ ತನಗಳಾಗಲೂ ಇಲ್ಲ. ಒಂದು ದಿನ ರಾಜನು ಧರ್ಮಯ್ಯನನ್ನು ಬಿಡುಗಡೆ ಮಾಡಿಸಿ, ಅವನಿಗೆ ಒಳ್ಳೆಯ ಸಂಬಳವನ್ನು ನಿರ್ಣಯಿಸಿ ಸಾಧು ಕಟ್ಟಿ ಸಿದ ಧರ್ಮಛತ್ರಕ್ಕೆ ಅವನನ್ನೇ ಧರ್ಮಕರ್ತನನ್ನಾಗಿ ನಿಯಮಿಸಿದನು. ಗಂಗಯ್ಯನು ಕಡೆತನಕವೂ ಸೆರೆ ಮನೆಯಲ್ಲೇ ಕೊಳೆತಿರಬೇಕಾಯಿತು. ಬೇತಾಳವು ಹೀಗೆ ಕಥೆಯನ್ನು ಮುಗಿಸಿ, ಹೀಗೆ ಪ್ರಶ್ನಿಸಿತು



"ರಾಜನೇ, ಈ ಕಥೆಯಲ್ಲಿ ತಾನೇ ಕಳ್ಳನೆಂದು ಒಪ್ಪಿಕೊಂಡ ಧರ್ಮಯ್ಯನನ್ನು ವಿಚಾರಣೆ ನಡೆಸದೆ ಬಿಡುಗಡೆ ಮಾಡಿ ಛತ್ರಕ್ಕೆ ಧರ್ಮಕರ್ತನನ್ನಾಗಿಯೂ ಮಾಡಿದನಲ್ಲ ರಾಜ? ಅವನನ್ನು ಹಿಡಿಯಲು ಸಹಾಯಮಾಡಿದ ಗಂಗಯ್ಯನಿಗೆ ಬಹುಮಾನ ಸಹಾ ಕೊಡದೆ ಸಾಯುವವರೆಗೆ ಕಾರಾಗೃಹದಲ್ಲಿ ಇರಿಸಿದನೇಕೆ? ಸರಿಯಾದ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆಯುವುದು".

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಜನು ಪ್ಪೇನೂ ಮಾಡಲಿಲ್ಲ. ಅವನು ಸೂಕ್ಷ್ಮಬುದ್ಧಿತಯುಳ್ಳವನು. ಅವನಿಗೆ ಧರ್ಮಯ್ಯನೇ ಕಳ್ಳನೆಂದು ಸಂದೇಹ ಕೂಡಾ ಆಗಿರಲಿಲ್ಲ. ಆದರೆ ಧರ್ಮಯ್ಯನೇ ಧರ್ಮದಾತನೆಂದು ಅನುಮಾನವಾಗಿತ್ತು. ಅದಕ್ಕೆ ಕಾರಣಗಳಿವೆ. ಧರ್ಮಯ್ಯನನ್ನು ಬಂಧಿಸಿದ ಕೂಡಲೇ ಧರ್ಮದಾತನಾಗಿದ್ದ ಸಾಧು ಅದೃಶ್ಯನಾಗಿದ್ದಾನೆ. ಅಲ್ಲದೆ ದೊಡ್ಡದೊಡ್ಡ ಕಳ್ಳತನಗಳನ್ನು ಮಾಡಿದವನೆನ್ನಲಾದ ಧರ್ಮಯ್ಯನ ಮನೆ ಬಹಳ ಸಾಮಾನ್ಯವಾಗಿರುವ ಸಂಗತಿಯನ್ನೂ ರಾಜನು ಭಟರ ಮೂಲಕ ತಿಳಿದಿರಬೇಕು. ಗಂಗಯ್ಯನ ಸಮಾಚಾರ ಹಾಗಿಲ್ಲ. ಅವನು ತನಗರಿವಿಲ್ಲದೆಯೇ ಅನೇಕ ಸಾಕ್ಷಿಗಳನ್ನು ಹೇಳಿದ್ದಾನೆ. ಅವನು ಧರ್ಮಯ್ಯನ ಸಹಚರನು ಆಗಿರದಿದ್ದರೆ ಧರ್ಮಯ್ಯ ಕಳ್ಳನೆಂಬ ಸಂಗತಿ ಅವನಿಗೆ ಹೇಗೆ ತಿಳಿಯುತ್ತಿತ್ತು? ಅಲ್ಲದೆ ಗಂಗಯ್ಯನು ತುಂಬಾ ವಿಲಾಸಜೀವಿತದವನೂ ಹೌದು. ಎಲ್ಲವನ್ನೂ ಮೀರಿ ಅವನು ಮಾಡಿದ ಬುದ್ಧಿಗೇಡಿತನವೇನೆಂದರೆ, ಧರ್ಮಯ್ಯ ಬಂಧಿಸಲ್ಪಟ್ಟ ಮೇಲೆ ಅವನು ಎಂದಿನಂತೆ ಕಳ್ಳತನಗಳನ್ನು ಮಾಡುತ್ತಾ ಬಂದುದು. ಈ ವಿಧವಾಗಿ ರಾಜನಿಗೆ ಗಂಗಯ್ಯ ಎಂಥವನೆಂದು ಪೂರ್ತಿ ಅರ್ಥವಾಯಿತು. ಅವನನ್ನು ಬೇರೆ ವಿಚಾರಣೆ ಮಾಡಬೇಕಾದ ಅಗತ್ಯವೂ ರಾಜನಿಗಿರಲಿಲ್ಲ. ಧರ್ಮಯ್ಯನು ಹೆಸರಿಗೆ ಮಾತ್ರ ಕಳ್ಳನೇ ಹೊರತು, ಕಳವು ಮಾಡಿ ಸಂಪಾದಿಸಿದುದನ್ನೆಲ್ಲಾ ಧರ್ಮಛತ್ರಕ್ಕೇ ಖರ್ಚು ಮಾಡಿ ತಾನು ವಿರಕ್ತನಾಗಿ ಸಾಧುವಿನಂತೆಯೇ ಜೀವಿಸಿದನು. ಅವನು ಗಂಗಯ್ಯನ ಹೆಸರನ್ನು ಸಹಾ ಹೊರಗೆ ಹಾಕಲಿಲ್ಲ. ಅಂತೆಯೇ ಅವನು ಗಂಗಯ್ಯನಂತೆ ಮಿತ್ರದ್ರೋಹಿಯಾಗಲಿಲ್ಲ. ಛತ್ರದ ನಿರ್ವಹಣೆಯನ್ನು ರಾಜನೇ ವಹಿಸುವ ಪಕ್ಷದಲ್ಲಿ ಅವನು ಕಳ್ಳತನ ಮಾಡುವಂತಹ ಸಂಭವವೂ ಇಲ್ಲ. ಇದನ್ನೆಲ್ಲಾ ಆಲೋಚನೆ ಮಾಡಿಯೇ ರಾಜನು ಧರ್ಮಯ್ಯನನ್ನು ಅವನಿಗೆ ತಕ್ಕ ಕೆಲಸದಲ್ಲಿಯೇ ನಿಯಮಿಸಿದನು. ರಾಜನ ನಿರ್ಣಯಕ್ಕೆ ಆಕ್ಷೇಪಣೆ ಏನಿಲ್ಲ".

ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿತ್ತು.



# ಹೆಂಡಂದಿರ ಪ್ರಭಾವ

ಅಣ್ಣಯ್ಯನೂ ತಮ್ಮಯ್ಯನೂ ನಿಜಕ್ಕೂ ಅಣ್ಣತಮ್ಮಂದಿರೇ. ಅವರಿಬ್ಬರಿಗೂ ಮದುವೆಯಾಗಿತ್ತು. ಒಂದೇ ಮನೆಯಲ್ಲಿದ್ದರು.

ಅಣ್ಣಯ್ಯ ದೊಡ್ಡ ಸೋಮಾರಿ. ಯಾವ ಕೆಲಸಕ್ಕೂ ಹೋಗುತ್ತಿರಲಿಲ್ಲ.

ತಮ್ಮಯ್ಯ ಅವಿರಾಮವಾಗಿ ಹೊಲತೋಟಗಳಲ್ಲಿ ಕೆಲಸ ಮಾಡುತ್ತ ಸಂಪಾದಿಸಿ ಎಲ್ಲರ ಹೊಟ್ಟೆಗೂ ಹಾಕಿಸುವವನು.

ಅಣ್ಣಯ್ಯನ ಹೆಂಡತಿ ಸೋಮಾರಿ ಗಂಡನೊಂದಿಗೆ, "ನಿಮ್ಮ ತಮ್ಮ ಮಾತ್ರ ಕಷ್ಟಬಟ್ಟು ಬೆವರು ಸುರಿಸಿ ಕೊಂಡಿರುವಾಗ ಕೂತುತಿನ್ನಲು ನಿಮಗೆ ನಾಚಿಕೆಯಿಲ್ಲವೆ ? ನೀವೂ ಕೆಲಸಮಾಡಿ" ಎಂದು ಆಗಾಗ ಹೇಳುವಳು.

ತಮ್ಮಯ್ಯನ ಹೆಂಡತಿಗೆ ತನ್ನ ಗಂಡನೊಬ್ಬನೇ ಕಷ್ಟಪಡುವುದೂ, ಬಾವಯ್ಯ ಸುಮ್ಮನೆ ಕುಳಿತುಕೊಂಡಿರುವುದೂ ಹಿಡಿಸಲಿಲ್ಲ. ಅವಳು ತನ್ನ ಗಂಡನೊಂದಿಗೆ "ನೀವೊಬ್ಬರೇ ಏಕೆ ದೇಹಪುಡಿ ಮಾಡಿಕೊಳ್ಳುವಿರಿ ? ನೀವು ಕೂಡಾ ಸುಮ್ಮನೆ ಕುಳಿತುತಿಂದು ಬಿದ್ದುಕೊಂಡಿರಬಾರದೆ ?" ಎಂದು ಯಾವಾಗಲೂ ಹೇಳುವಳು.

ಕಾಲಕ್ರಮದಲ್ಲಿ ಇಬ್ಬರು ಗಂಡಂದಿರ ಮೇಲೂ ಅವರವರ ಹೆಂಡತಿಯರ ಪ್ರಭಾವ ಚೆನ್ನಾಗಿ ನಾಟಿತು. ಅಣ್ಣಯ್ಯ ಸೋಮಾರಿಯಾಗಿರಲು ನಾಚಿ, ಕೆಲಸಕ್ಕೆ ತೊಡಗಿ ಒಳ್ಳೆಯ ರೈತನಾದನು.

ತಮ್ಮಯ್ಯ ಕೆಲಸಮಾಡುವ ಅಭ್ಯಾಸಬಿಟ್ಟು ಜಡಸೋಮಾರಿಯಾಗಿ ಸುಮ್ಮನೇ ಕುಳಿತು ಕಾಲ ಕಳೆಯ ತೊಡಗಿದನು.





# ನಂಬುಗೆ ತಪ್ಪಿತು

ಅನೇಕ ವರ್ಷಗಳ ಹಿಂದೆ ರಾಮಶಾಸ್ತ್ರಿ ಎಂಬ ನಾಡುವೈದ್ಯನಿದ್ದ. ಅವನ ಕೈಗುಣ ಒಳ್ಳೆಯದಿರುವುದೆಂದು ಎಲ್ಲರೂ ಹೇಳುತ್ತಿದ್ದರು. ಎಂಥವರ ದೀರ್ಘ ರೋಗಗಳಾದರೂ ವಾಸಿಯಾಗುತ್ತಿತ್ತು. ಅವನು ಹಣವನ್ನು ಮುಖ್ಯ ಗುರಿಯನ್ನಾಗಿ ಇಟ್ಟುಕೊಂಡವನಲ್ಲ. ತನ್ನ ಬಳಿಗೆ ಬಂದ ರೋಗಿಗಳನ್ನು ಗುಣಮುಖರನ್ನಾಗಿ ಮಾಡುವುದೇ ಅವನ ಮುಖ್ಯ ಗುರಿ. ಆದರೂ ರಾಮಶಾಸ್ತ್ರಿಗ ಧನವೂ ಚೆನ್ನಾಗಿಯೇ ಬರುತ್ತಿತ್ತು. ಇದಕ್ಕೆ ಕಾರಣ ಅವನ ಬಳಿಗೆ ಬರುವ ರೋಗಿಗಳ ಸಂಖ್ಯೆ ಬಹಳ ಹೆಚ್ಚು.

ವೈದ್ಯರಾಮಶಾಸ್ತ್ರಿಗೆ ಗೋವಿಂದನೆಂಬ ಒಬ್ಬ ಮಗನಿದ್ದ. ಈ ಮಗನನ್ನು ತನ್ನ ಹಾಗೆಯೇ ವೈದ್ಯನನ್ನಾಗಿ ತಯಾರುಮಾಡಬೇಕೆಂದು ರಾಮಶಾಸ್ತ್ರಿ ಅಂದುಕೊಂಡು, ಅವನಿಗೆ ಮೂಲಿಕೆಗಳನ್ನು ಕುರಿತು ಹೇಳಿಕೊಡತೊಡಗಿದ. ಆದರೆ ಗೋವಿಂದನಿಗೆ ತಂದೆಯು ಧನದ ಮೇಲಿರುವಷ್ಟು ಗೌರವ ತಂದೆ ಮಾಡುವ ವೈದ್ಯಕೀಯದಲ್ಲಿ ಇರಲಿಲ್ಲ.

ತಂದೆ ಮಾಡುವ ವೈದ್ಯವು ಕೇವಲ ಗಿಡಮೂಲಿಕೆಗಳದೆಂದು, ಅದೇನೂ ಶಾಸ್ತ್ರೀಯ ವೈದ್ಯವಲ್ಲವೆಂದು ಅವನ ನಂಬುಗೆಯಾಗಿತ್ತು. ಆದುದರಿಂದ ಅವನು ತಂದೆಯೊಂದಿಗೆ ಸಹಕರಿಸದೆ, ಪಟ್ಟಣಕ್ಕೆ ಹೋಗಿ ಶಾಸ್ತ್ರೀಯವಾಗಿ ವಿದ್ಯೆ ಕಲಿತು ಬಂದರೆ ಒಳ್ಳೆಯದೆಂದೂ, ಇದೆಲ್ಲಾ ಹಳೆಯ ಕಾಲದ ಗೊಡ್ಡುವೈದ್ಯವೆಂದೂ ಹೇಳತೊಡಗಿದನು. ತನಗೆ ತಿಳಿಯದಿರುವಂತಹ ವೈದ್ಯವಿದ್ಯೆಯನ್ನು ಮಗನು ಕಲಿತುಕೊಂಡು ಬಂದರೆ ವೈದ್ಯಕೀಯವು ಇನ್ನಷ್ಟು ಬೆಳಗುವುದೆಂದು ರಾಮಶಾಸ್ತ್ರಿಗೆ ತೋರಿತು. ಅಂತೆಯೇ ಮಗನನ್ನು ಅವನ ಇಷ್ಟದಂತೆ ಪಟ್ಟಣಕ್ಕೆ ಕಳುಹಿಸಿದನು.

ಪಟ್ಟಣದಲ್ಲಿ ಗೋವಿಂದನು ತಂದೆಯ ಹಣವನ್ನು ದುಂದು ಮಾಡುತ್ತ, ವಿದ್ಯೆಯಲ್ಲಿ ಶ್ರದ್ಧೆಯಿಲ್ಲದವನಾಗಿ, ಕಡೆಗೆ ಹೇಗೋ ಒಂದು ರೀತಿಯಾಗಿ ಆ ವೈದ್ಯವಿದ್ಯೆಯನ್ನು ಮುಗಿಸಿ ಮನೆಗೆ ಹಿಂದಿರುಗಿದನು. ಅವನು ಬಹುದೊಡ್ಡ ವೈದ್ಯನಾದನೆಂದು ಊರವರು ಅಂದುಕೊಂಡರು.

ಅದಕ್ಕೆ ಸರಿಯಾಗಿ ರಾಮಶಾಸ್ತ್ರಿ ಗೋವಿಂದನನ್ನು ತನಗಿಂತ ದೊಡ್ಡ ವೈದ್ಯನೆಂದು ಹೇಳುತ್ತ ಎಲ್ಲರಿಗೂ ಪರಿಚಯಮಾಡಿಸಿ, ತನ್ನ ಹತ್ತಿರ ಬರುವ ರೋಗಿಗಳನ್ನು ಗೋವಿಂದನಿಗೆ ತೋರಿಸಲು ತೊಡಗಿ

ಬಿ. ಎನ್. ರಾವ್



ದನು. ಆದರೆ ಗೋವಿಂದನಿಗೆ ರೋಗ ನಿದಾನದಲ್ಲಿ ಸ್ವಲ್ಪಕೂಡ ನೈಪುಣ್ಯವಿಲ್ಲವೆಂದು ಬೇಗದಲ್ಲೇ ಬಯಲಾಯಿತು. ತೀವ್ರರೋಗಗಳಿಂದ ನರಳುವಂತಹ ರೋಗಿಗಳಿಗೆ ಗೋವಿಂದನಿಂದ ಚಿಕಿತ್ಸೆ ಮಾಡಿಸುವುದು ಅಪಾಯಕರವೆಂದು ರಾಮಶಾಸ್ತ್ರಿಗೆ ಗೊತ್ತಾಗಿಬಿಟ್ಟಿತು. ಚಿಕ್ಕಚಿಕ್ಕ ರೋಗಗಳನ್ನು ಕೂಡಾ ಗೋವಿಂದನು ವಾಸಿಮಾಡುವುದರ ಬದಲಿಗೆ, ರೋಗವನ್ನು ಮುದುರಿಸಿ ದೊಡ್ಡ ರೋಗದ ಕಡೆಗೆ ತಿರುಗಿಸಿಬಿಡುವನು. ಆಗ ರಾಮಶಾಸ್ತ್ರಿಯೇ ತಕ್ಕ ಚಿಕಿತ್ಸೆ ಮಾಡಬೇಕಾಗಿ ಬರುತ್ತಿತ್ತು.

ಈ ವಿಧವಾಗಿ ರಾಮಶಾಸ್ತ್ರಿಗೆ ಎಚ್ಚರ ಬಂದಿತೇ ಹೊರತು, ಗೋವಿಂದನ ಮನಸ್ಸಿನಲ್ಲಿ ತಾನೇ ದೊಡ್ಡ ವೈದ್ಯನೆಂದೇ ಇತ್ತು. ತನ್ನಿಂದ ರೋಗವು ಹೆಚ್ಚಾದಂತೆ ಕಂಡರೂ, ಸಮೂಲವಾಗಿ ರೋಗವಾಸಿಯಾಗಬೇಕಾದರೆ ಹಾಗೇ ಆಗಬೇಕೆಂದು ವಾದಿಸುವನು. ತಂದೆಗೆ ಏನೂ ಗೊತ್ತಿಲ್ಲವೆಂಬ ಅವನ ನಂಬುಗೆ ಹಾಗೇ ಇದ್ದಿತು. ಮಾತ್ರವಲ್ಲ, ತಂದೆಯ ಅಲ್ಪವೈದ್ಯದಿಂದ ತನಗೆ ಹೆಸರು ಬಾರದೆ ಹೋಯಿತೆಂದೂ ಹೇಳಿ, "ಇನ್ನು ನೀವು ಸುಮ್ಮನಿರಿ" ಎಂದು ಹೇಳಿದನು ತಂದೆಗೆ.

ಮೊಟ್ಟೆಯೇ ಮರಿಯನ್ನು ಎಕ್ಕರಿಸುವಂತೆ ರಾಮಶಾಸ್ತ್ರಿಗೆ ತೋರಿತು. ಅವನು ಗೋವಿಂದನೊಂದಿಗೆ, "ಸರಿಯಪ್ಪ. ನೀನು ಹೇಳುವುದು ನಿಜವೇ. ನನ್ನ ಗೊಡ್ಡುವೈದ್ಯವೇ ಈ ಹಳ್ಳಿಯೂರಿಗೆ ಸಾಕು. ನಿನ್ನಂಥ ಘನವೈದ್ಯನು ಪಟ್ಟಣದಲ್ಲೇ ಬೆಳಕಿಗೆ ಬರಬೇಕು. ನೀನು ಪಟ್ಟಣಕ್ಕೆ ಹೋಗಿ ವೈದ್ಯಮಾಡಪ್ಪ" ಎಂದನು. ಗೋವಿಂದನಿಗೆ ಈ ಮಾತು ಹಿತವಾಗಿ ತೋರಿತು. ಆದರೆ ಅವನು ಪಟ್ಟಣಕ್ಕೆ ಹೊರಡಲು ತಯಾರಾಗುವಷ್ಟರಲ್ಲಿ ಅವನಿಗೇ ಕಾಯಿಲೆ ಹಿಡಿಯಿತು. ಕೆಲವೇ ದಿನಗಳಲ್ಲಿ ಅವನ ಕಾಯಿಲೆ ತೀವ್ರವಾಯಿತು. ರಾಮಶಾಸ್ತ್ರಿ ಅವನ ರೋಗ ಗುಣವಾಗಲು ತಕ್ಕ ಔಷಧಿಗಳನ್ನು ಕೊಟ್ಟನಾದರೂ ಅದರಿಂದ ಲವಲೇಶವೂ ಉಪಯೋಗವಾಗಲಿಲ್ಲ.

ಒಂದು ತಿಂಗಳು ಕಳೆದ ಮೇಲೆ ರಾಮಶಾಸ್ತ್ರಿ ಚೆನ್ನಾಗಿ ಆಲೋಚನೆ ಮಾಡಿ, ಹಿಂದೆ ತನ್ನ ಬಳಿಯಲ್ಲಿ ವೈದ್ಯವೃತ್ತಿಯನ್ನು ಕಲಿತು ದೂರದ ಊರಿನಲ್ಲಿ ವೈದ್ಯನಾಗಿ ಜೀವಿಸಿಕೊಂಡಿದ್ದ, ಸಸುರನೆಂಬವನನ್ನು ಕರೆಯಿಸಿ, ಅವನಿಂದ ತನ್ನ ಮಗನಿಗೆ ವೈದ್ಯ ಮಾಡಿಸಿದನು.

ಸಸುರನು ಗೋವಿಂದನ ನಾಡಿ ಹಿಡಿದ ಕ್ಷಣದಿಂದಲೇ ಗೋವಿಂದನ ರೋಗ ತಗ್ಗುವದಾರಿಗೆ ತಿರುಗಿತು. ಅಮೇಲೆ ಬೇಗಬೇಗನೇ ಗುಣಮುಖನಾಗತೊಡಗಿದನು. ರಾಮಶಾಸ್ತ್ರಿಯಂತಹ ನುರಿತ ಹಸ್ತರಾಶಿಯ ವೈದ್ಯನಿಗೆ ತಿಂಗಳಾದರೂ ಬಾಗದ ಆ ರೋಗ, ಹೆಸರು ದೆಸೆಯಿಲ್ಲದ ಸಸುರನ ಔಷಧಗಳಿಂದ ಗುಣವಾಯಿತೆಂದರೆ ಗ್ರಾಮಸ್ಥರಿಗೆ ವಿಚಿತ್ರವಾಗಿ ತೋರಿತು. ಎಲ್ಲರೂ ಸಸುರನನ್ನು ರಾಮ

ಶಾಸ್ತ್ರಿಯ ಎದುರಿನಲ್ಲೇ ಹೊಗಳಿದರು. ಹೀಗೆ ತಾನು ಬಂದ ಕೆಲಸ ಪೂರ್ತಿಯಾದ ಮೇಲೆ ಸಸುರನು ತನ್ನ ಊರಿಗೆ ಹೊರಡಲು ಸಿದ್ಧನಾದನು. ಆಗ ರಾಮಶಾಸ್ತ್ರಿ ಅವನನ್ನು ತಡೆದು. "ಇನ್ನು ಮೇಲೆ ನೀನು ಈ ಊರಿನಲ್ಲೇ ಇದ್ದು ವೈದ್ಯ ವೃತ್ತಿ ನಡೆಸ ಬೇಕು. ನಿನಗೆ ಇಲ್ಲಿ ಒಳ್ಳೆಯ ಸಂಪಾದನೆಯೂ ಆಗುತ್ತೆ." ಎಂದನು.

"ಇದೇನು ನೀವು ಹೇಳುವಿರಿ? ನಿಮ್ಮಂತಹ ಘನ ವೈದ್ಯರು ಇಲ್ಲಿರುವಾಗ ನಾನೇಕೆ?" ಎಂದನು ಸಸುರ ಆಶ್ಚರ್ಯದಿಂದ.

"ನಾನು ನಾಳೆಯೇ ಇಲ್ಲಿಂದ ಹೊರಟು ಹೋಗುತ್ತೇನಪ್ಪ." ಎಂದ ರಾಮಶಾಸ್ತ್ರಿ. ಸಸುರನು ಇನ್ನಷ್ಟು ಆಶ್ಚರ್ಯದಿಂದ, "ಅದೇಕೆ? ಹಾಗೇ ನಾಯಿತು? ನಿಮಗೆ ಈ ಊರಿನಲ್ಲಿ ಎಷ್ಟೋ ಕೀರ್ತಿ ಯಿದೆ. ಸಂಪಾದನೆಯೂ ಇದೆ. ನಿಮಗೆ ಯಾವ ಕೊರತೆಯೂ ಇಲ್ಲದಿರುವಾಗ ಊರು ಬಿಟ್ಟು ಹೋಗುವಿರೇಕೆ?" ಎಂದು ಸಸುರನು ಕೇಳಿದ.

"ವೈದ್ಯನಾದ ನನಗೆ ಈ ಊರಿನಲ್ಲಿ ಅಪಕೀರ್ತಿ ಬಂದಿತು. ನನ್ನ ಮಗನಿಗೆ ಬಂದ ರೋಗದಿಂದಾಗಿ ನನ್ನ ಔಷಧಿಯಲ್ಲಿ ಊರವರಿಗಿರುವ ವಿಶ್ವಾಸ ಹೋಯಿತು. ರೋಗಿಗಳಿಗೆ ನಂಬುಗೆಯಿಲ್ಲದ ವೈದ್ಯವು ನಿಷ್ಫಲ!" ಎಂದ ರಾಮಶಾಸ್ತ್ರಿ.

"ನಿಮ್ಮ ಮಗನಿಗೆ ರೋಗ ಗುಣವಾದುದು ನೀವು ಹೇಳಿಕೊಟ್ಟ ಚಿಕಿತ್ಸೆಯಿಂದಲೇ ಅಲ್ಲವೇ? ನೀವು ಹೇಳಿದ ಔಷಧವನ್ನೇ ನಾನು ತಯಾರಿಸಿ ಕೊಟ್ಟದ್ದು" ಎಂದ ಸಸುರ.

"ಅದೆಲ್ಲ ಹೌದು. ಆ ಔಷಧಗಳನ್ನೇ ನಾನು ಕೊಟ್ಟಾಗ ನನ್ನ ಮಗನ ರೋಗ ಗುಣವಾಲಿಲ್ಲ. ಅದಕ್ಕೆ ಕಾರಣ ನನ್ನ ಚಿಕಿತ್ಸೆಯಲ್ಲಿ ನನ್ನ ಮಗನಿಗೆ ನಂಬುಗೆ ಇರಲಿಲ್ಲ. ಅದಕ್ಕೇ ನಿನ್ನನ್ನು ಕರೆಯಿಸಿ ನಿನ್ನ ಮೂಲಕ ಚಿಕಿತ್ಸೆ ಮಾಡಿಸಿದೆ. ಅದರಿಂದಾಗಿ ಊರೊಳಗಿನವರಿಗೆ ನನ್ನ ಮೇಲಿನ ನಂಬುಗೆ ಹೋಯಿತು. ಹೋದರೆ ಹೋಗಲಿ. ನೀನು ನಾಲ್ಕು ಮಕ್ಕಳ ತಂದೆ. ಈ ಊರಿನಲ್ಲಿ ಅನೇಕರು ಧನ ವಂತರೂ ಇದ್ದಾರೆ. ಇಲ್ಲಿ ಸೇರಿದರೆ ನಿನಗೆ ದಾರಿದ್ರ್ಯದ ಕಷ್ಟ ಇರಲಾರದು. ನಾನು ನನಗೆ ಬೇಕಾದುದನ್ನು ಎಲ್ಲಿಯಾದರೂ ಸಂಪಾದಿಸಿಕೊಳ್ಳಬಲ್ಲೆ" ಎಂದು ಹೇಳಿ ರಾಮಶಾಸ್ತ್ರಿ ತನ್ನ ಹೆಂಡತಿಯೊಂದಿಗೆ ಬೇರೊಂದು ಗ್ರಾಮಕ್ಕೆ ಹೊರಟುಹೋದನು. ಸಸುರನು ಆ ಊರಲ್ಲಿಯೇ ತಳವೂರಿ ಚೆನ್ನಾಗಿ ವೈದ್ಯವೃತ್ತಿ ಮಾಡುತ್ತ ಕೀರ್ತಿ ಪಡೆಯತೊಡಗಿದನು. ಗೋವಿಂದನು ಪಟ್ಟಣಕ್ಕೆ ಹೋಗಿ ಅರ್ಧಂಬರ್ಧ ವೈದ್ಯನಾಗಿ ಹೇಗೋ ಕಾಲಕಳೆಯ ತೊಡಗಿ ಕ್ರಮೇಣ ಅವನೂ ಒಬ್ಬ ವೈದ್ಯನೆನಿಸಿದನು.



# ಎಚ್ಚರಿಕೆ

ಹಿಂದೆ ಒಂದು ದೇಶದಲ್ಲಿ ಗಾಳಿಮಳೆ ವಿಪರೀತವಾಗಿ ತುಂಬಾ ಜನನಷ್ಟವೂ ಆಸ್ತಿನಷ್ಟವೂ ಉಂಟಾಯಿತು. ನಷ್ಟಕಷ್ಟಗಳಿಗೊಳಗಾದ ಪ್ರಜೆಗಳು ರಾಜನ ಬಳಿಗೆ ಹೋಗಿ ಸಹಾಯಮಾಡಬೇಕೆಂದು ಕೇಳಿದರು. ಸಹಾಯ ಮಾಡಲು ರಾಜನು ಒಪ್ಪಿದನಾದರೂ, ಅದು ಹೇಗೆ ಮಾಡಬೇಕೆಂದು ಅವನಿಗೆ ತಿಳಿಯಲಿಲ್ಲ. ಮಂತ್ರಿಯ ಆಲೋಚನೆಯೂ ಹಿಡಿಸಲಿಲ್ಲ.

ರಾಜನು ಗೂಢಚಾರರನ್ನು ಕಳುಹಿಸಿ ನಷ್ಟಕ್ಕೆ ಪಾಲಾದವರ ಒಂದು ಪಟ್ಟಿಯನ್ನು ತರಿಸಿದನು. ಅವರಿಗೆ ಧನ ಸಹಾಯಮಾಡಿದರೆ ಒಳ್ಳೆಯದೋ, ವಸ್ತುಗಳನ್ನು ಕೊಟ್ಟು ಸಹಕರಿಸಿದರೆ ಒಳ್ಳೆಯದೋ ಎಂದು ತಿಳಿಯದೆ, ಅದನ್ನು ತಿಳಿದುಕೊಂಡು ಬರಲು ಮತ್ತೆ ಗೂಢಚಾರರನ್ನು ಕಳುಹಿಸಿದನು.

ಅವರು ಸ್ವಲ್ಪಕಾಲದ ಮೇಲೆ ಹಿಂದಿರುಗಿ ಬಂದು ರಾಜನೊಂದಿಗೆ, ಅರೆವಾಸಿ ಜನರು ಧನ ಸಹಾಯ ಬೇಕೆನ್ನುತ್ತಾರೆಂದೂ, ಉಳಿದ ಅರೆವಾಸಿಯವರು ವಸ್ತುಗಳ ಸಹಾಯ ಕೇಳುತ್ತಾರೆಂದೂ ತಿಳಿಸಿದರು. ರಾಜನಿಗೆ ಇನ್ನಷ್ಟು ಸಮಸ್ಯೆಗಿಟ್ಟುಕೊಂಡಿತು. ಅದಕ್ಕೇನು ಮಾಡುವುದೆಂದು ತೋರದೆ ರಾಜನು ಕರ್ತವ್ಯವನ್ನು ನಿರ್ಣಯಿಸಲು ಬುದ್ಧಿವಂತರನ್ನು ಆರಿಸಿ ಒಂದು ಸಂಘವನ್ನು ಕೂಡಿಸಿದನು.

ಆ ಸಂಘವು ಕಾಲಕ್ರಮದಲ್ಲಿ ಧನ ಸಹಾಯವೇ ಒಳ್ಳೆಯದೆಂದು ನಿರ್ಣಯಿಸಿತು. ರಾಜನು ನಷ್ಟಪಟ್ಟ ಪ್ರಜೆಗಳಿಗೆ ತುಂಬಾ ಧನವನ್ನು ಕೊಡಿಸಿದನು.

ತರುವಾಯ ರಾಜನು ಬೇರೆ ವೇಷದಿಂದ ಅಲ್ಲಿಯ ಪ್ರಜೆಗಳ ಮಧ್ಯಕ್ಕೆ ಹೋಗಿ, ಅವರು ಏನು ಹೇಳಿಕೊಳ್ಳುವರೆಂದು ಕೇಳಿ ಹಿಂದಿರುಗಿ ಬಂದು ಮಂತ್ರಿಯೊಂದಿಗೆ "ಪ್ರಜೆಗಳು ಕೃತಘ್ನರು. ಅವರು ನಮ್ಮ ಹೆಸರನ್ನೇ ನೆನೆಯುವುದಿಲ್ಲ. ಗಾಳಿಮಳೆ ಬಂದು ಕಷ್ಟದಲ್ಲಿದ್ದಾಗ, ಯಾವನೋ ಸುಬ್ಬಾಶೆಟ್ಟಿ ನಾಲ್ಕುದಿನ ಅನ್ನದಾನ ಮಾಡಿದನಂತೆ. ಅವನ ಹೆಸರನ್ನೇ ಹೇಳಿಕೊಳ್ಳುತ್ತಿದ್ದಾರೆ !" ಎಂದನು.

"ಹೌದು ಪ್ರಭುಗಳೇ ! ಸಮಯಕ್ಕೆ ಸಿಕ್ಕದ ಸಹಾಯ ಸಾವಿರವಾದರೂ ವ್ಯರ್ಥವೇ !" ಎಂದನು ಮಂತ್ರಿ.





# ಮಕ್ಕಳ ಡೇರೆ

ಪೂರ್ವಕಾಲದಲ್ಲಿ ಶಾಂತಿವನವೆಂಬ ಒಂದು ಊರಿನಲ್ಲಿ ಶ್ರೀಪತಿ ಮತ್ತು ಭೂಪತಿ ಎಂಬವರು ಪ್ರಮುಖರಾಗಿದ್ದರು. ಚಿಕ್ಕಂದಿನಲ್ಲಿ ಅವರಿಬ್ಬರೂ ಮಿತ್ರರಾಗಿಯೇ ಇದ್ದು, ದೊಡ್ಡವರಾದ ಮೇಲೆ ಪೂರ್ವ ಪಶ್ಚಿಮದಂತಾದರು. ಗ್ರಾಮದೊಳಗಿನ ರಾಜಕೀಯಗಳಿಂದ ಅವರಲ್ಲಿ ಅಸೂಯೆಯೂ ದ್ವೇಷವೂ ಉಂಟಾಗಿ ಕಡೆಗೆ ಇಬ್ಬರೂ ಬದ್ಧ ಶತ್ರುಗಳಾಗಿಬಿಟ್ಟರು.

ಅವರ ಶತ್ರುತ್ವವು ಎಲ್ಲಿಯವರೆಗೆ ಹೋಯಿತೆಂದರೆ, ಒಬ್ಬರ ಮೇಲೊಬ್ಬರು ದ್ರೋಹ ಕಾರ್ಯಗಳಿಗೇ ತೊಡಗಿದರು. ಕಡೆಗೆ ಒಬ್ಬರನ್ನೊಬ್ಬರು ಕೊಲ್ಲುವುದಕ್ಕೂ ತಯಾರಾದರು.

ಆ ಊರಿಗೆ ನಾಲ್ಕು ಮೈಲು ದೂರದಲ್ಲಿರುವ ಕಾಳೀಪಟ್ಟದಲ್ಲಿ ಪ್ರತಿ ವರ್ಷವೂ ಜಾತ್ರೆ ನಡೆಯುತ್ತದೆ. ಅಲ್ಲಿಯ ಜಾತ್ರೆಗೆ ಶ್ರೀಪತಿಯೂ ಭೂಪತಿಯೂ ತಪ್ಪದೆ ಹೋಗುತ್ತಾರೆ. ಈಸಾರಿ ಜಾತ್ರೆಯಿಂದ ಹಿಂದಿರುಗಿ ಬರುವಾಗ ಭೂಪತಿಯನ್ನು ಕೊಲ್ಲಲು ಶ್ರೀಪತಿಯೂ, ಶ್ರೀಪತಿಯನ್ನು ಕೊಲ್ಲಲು ಭೂಪತಿಯೂ ನಿಶ್ಚಯಿಸಿ, ಅದಕ್ಕೆ ಬೇಕಾದ ಏರ್ಪಾಡು ಮಾಡಿ ಇಟ್ಟಿದ್ದರು. ಅದು ಹೇಗೆಂದರೆ, ದಾರಿಯಲ್ಲಿ ಒಂದು ದೊಡ್ಡ ಆಲದಮರವಿತ್ತು. ಜಾತ್ರೆಗೆ ಹೋದವರು ಆ ದಾರಿಯಾಗಿಯೇ ಬರಬೇಕು. ಆ ಮರದ ಹತ್ತಿರ ಬರುವಾಗ ಕತ್ತಲಾಗಿಬಿಟ್ಟಿರುತ್ತದೆ. ಶ್ರೀಪತಿ ಆಲದಮರದ ಬುಡಕ್ಕೆ ಬಂದ ಕೂಡಲೇ ಅವನನ್ನು ಕೊಂದು ಹಾಕಲು ಕೊಲೆಗಡುಕರನ್ನು ಏರ್ಪಡಿಸಿಟ್ಟಿದ್ದನು ಭೂಪತಿ. ಆಲದ ಮರ ದಾಟಿದ ಮೇಲೆ ಕೆರೆದಂಡೆಯಲ್ಲಿ ನಡೆಯಬೇಕು. ಆ ಕೆರೆದಂಡೆಯ ಬದಿಯಲ್ಲಿ ಭೂಪತಿಯನ್ನು ಕೊಲ್ಲಲು ಶ್ರೀಪತಿ ಕೊಲೆಗಡುಕರನ್ನು ಇರಿಸಿದ್ದನು. ಒಬ್ಬರ ರಹಸ್ಯ ಇನ್ನೊಬ್ಬರಿಗೆ ತಿಳಿಯದು.

ಆ ವರ್ಷದ ಜಾತ್ರೆ ಹೆಚ್ಚಿನ ವೈಭವದಿಂದ ನಡೆಯಿತು. ಈಸಾರಿ ನಡೆದ ಚಿತ್ರವಿಚಿತ್ರಗಳಲ್ಲಿ ವಿಶೇಷವಾದುದೇನೆಂದರೆ, ಮಕ್ಕಳ ಡೇರೆ! ಹೆಸರಿಗೆ ಅದು ಮಕ್ಕಳ ಡೇರೆಯಾದರೂ ಅದರೊಳಗೆ ದೊಡ್ಡವರನ್ನು ಮಾತ್ರವೇ ಹೋಗಲು ಬಿಡುತ್ತಿದ್ದರು, ಜನರನ್ನು ಆಕರ್ಷಿಸುವಂತೆ ಅಲಂಕರಿಸಲ್ಪಟ್ಟ ಆ ಡೇರೆಯ ಮುಂದೆ ವಿಚಿತ್ರವೇಷದಿಂದ ಒಬ್ಬ ಮುದುಕನು ನಿಂತುಕೊಂಡಿದ್ದನು. ಆ ಮುದುಕ ಸಿದ್ಧ ವಿದ್ಯೆ

ಕೆ. ಸದಾನಂದ

ಗಳನ್ನು ಕಲಿತ ದೊಡ್ಡ ಮಾಂತ್ರಿಕನಂತೆ. ಅವನು ದೊಡ್ಡವರನ್ನು ಆಹ್ವಾನಿಸುತ್ತ, "ನೀವು ಈ ಡೇರೆಯೊಳಗೆ ಪ್ರವೇಶಿಸಿ ಎಂದೋ ಮರೆತುಹೋದ ನಿಮ್ಮ ಚಿಕ್ಕತನದಲ್ಲಿಯ ಸೊಗಸುಗಳನ್ನು ಮತ್ತೆ ಅನುಭವಿಸಿರಿ" ಎನ್ನುತ್ತಿದ್ದನು.

ಡೇರೆಯೊಳಗಿನಿಂದ ಹೊರಗೆ ಬರುವವರು ಸಂತೋಷದಿಂದ ನಗುನಗುತ್ತ ಬರುವುದನ್ನು ನೋಡಿದರೆ, ಇತರರಿಗೂ ಒಳಗೆಹೋಗುವ ಕುತೂಹಲ ಉಂಟಾಗುತ್ತಿತ್ತು. ಅಂತೆಯೇ ಶ್ರೀಪತಿ ಕೂಡಾ ತನ್ನ ಹೆಂಡತಿಯೊಂದಿಗೆ ಆ ಡೇರೆಯೊಳಗೆ ಪ್ರವೇಶಿಸಿ, ಕೂಡಲೇ ಹತ್ತು ವರ್ಷದ ಹುಡುಗನಾಗಿ ಬದಲಾಯಿಸಿಬಿಟ್ಟನು.

ಮತ್ತೆ ಸ್ವಲ್ಪ ಹೊತ್ತಿಗೆ ಭೂಪತಿ ಕೂಡಾ ತನ್ನ ಹೆಂಡತಿಯೊಂದಿಗೆ ಡೇರೆಯೊಳಗೆ ಬಂದು, ಅವನೂ ಹತ್ತು ವಯಸ್ಸಿನ ಹುಡುಗನಾಗಿ ಬದಲಾದನು. ಅವರ ಹೆಂಡತಿಯರಿಬ್ಬರೂ ಐದಾರು ವರ್ಷದ ಹುಡುಗಿಯರಾಗಿ ಬದಲಾಯಿಸಿ, ತಮ್ಮ ಗುರುತಿನ ಹುಡುಗಿಯರನ್ನು ಕಾಣದೆ ಕಕ್ಕಾಬಿಕ್ಕಿಯಾದವರಂತೆ ಹೊರಗೆ ಓಡಿ ಮಾಮೂಲು ರೂಪಕ್ಕೆ ಬಂದು, ತಮ್ಮ ಗಂಡಂದಿರ ಬರುವಿಕೆಗಾಗಿ ಕಾದುನಿಂತರು.

ಶ್ರೀಪತಿ ಭೂಪತಿಯರಿಬ್ಬರೂ ತಮ್ಮ ಹೆಂಡತಿಯರ ಗೊಡವೆಯನ್ನೇ ಮರೆತುಬಿಟ್ಟರು. ಇಬ್ಬರಿಗೂ ಚಿಕ್ಕಂದಿನದೇ ನೆನಪು. ಶ್ರೀಪತಿಯನ್ನು ಭೂಪತಿಯೂ, ಭೂಪತಿಯನ್ನು ಶ್ರೀಪತಿಯೂ ಕೈ ಕೈ ಹಿಡಿದು ಅಪ್ಪಿಕೊಂಡರು. ಇತರ ಹುಡುಗರೊಂದಿಗೆ ತಾವೂ ಆಡಿದರು. ಅಲ್ಲಿ ಮಕ್ಕಳ ಆಟಕ್ಕೆ ಬೇಕಾದ ಉಯ್ಯಾಲೆಗಳು, ಜಾರು ದಿಂಡುಗಳು ಮೊದಲಾದುವೆಷ್ಟೋ ಇದ್ದುವು. ಶ್ರೀಪತಿ ಭೂಪತಿಯರು ಎಲ್ಲ ಆಟಗಳನ್ನೂ ಆಡಿದರು. ಆ ವಯಸ್ಸಿನಲ್ಲಿ ಅವರಿಬ್ಬರೂ ಪ್ರಾಣ ಸ್ನೇಹಿತರು. ಒಂದೇ ಶಾಲೆಯಲ್ಲಿ ಓದುತ್ತ ಕೂಡಿ ತಿರುಗಾಡುತ್ತಿದ್ದರು. ಒಂದುಸಾರಿ ಈಜು ಬಾರದ ಶ್ರೀಪತಿ ಕೆರೆಯಲ್ಲಿ ಬಿದ್ದು ಮುಳುಗಿಹೋಗುವ ಸ್ಥಿತಿ ಬಂದಿತ್ತು. ಅದನ್ನು ನೋಡಿ ಈಜು ಬಲ್ಲ ಭೂಪತಿ ಕೆರೆಗೆ ಹಾರಿ ಅವನನ್ನು ರಕ್ಷಿ



ಸಿದ್ದನು. ಮತ್ತೊಂದುಸಾರಿ ಭೂಪತಿಗೆ ಕಾಲು ಬಳುಕಿ ಛುಳುಕಿಕೊಂಡು ನಡೆಯಲಾಗದ ಸ್ಥಿತಿ ಬಂದಾಗ, ಶ್ರೀಪತಿ ಅವನನ್ನು ಹೊತ್ತುಕೊಂಡು ಎರಡು ಮೈಲು ದೂರದಲ್ಲಿದ್ದ ಅವನ ಮನೆಗೆ ತಲಪಿಸಿದ್ದ. ಇಂತಹ ಎಷ್ಟೋ ವಿಷಯಗಳನ್ನು ಈಗ ಅವರು ನೆನಪು ಮಾಡಿಕೊಂಡರು.

ಕಡೆಗೆ ಅವರು ಆ ಡೇರೆಯೊಳಗಿನಿಂದ ಹೊರಗೆ ಬಂದು ಎಂದಿನಂತೆ ದೊಡ್ಡವರಾದರು. ಆಗ ಅವರ ಮನಸ್ಸು ಮಾತ್ರ ವಿಚಿತ್ರವಾಗಿ ಬದಲಾವಣೆಗೊಂಡಿತ್ತು. ಡೇರೆಯೊಳಗೆ ಬಂದಿದ್ದ ಮನಸ್ಥಿತಿ ಹಾಗೆಯೇ ನನಪಿನಲ್ಲಿ ಉಳಿದಿತ್ತು. ಅವರಿಗಾಗಿ ಕಾದುಕೊಂಡಿದ್ದ ಅವರ ಹೆಂಡತಿಯರ ಗೊಡವೆ ಹಚ್ಚಿಕೊಳ್ಳದೆ ತಮಗೆ ಅವಸರದ ಕೆಲಸವಿರುವುದಾಗಿ ಹೇಳಿ ಅವರನ್ನು ಪರಿಚಿತರೊಂದಿಗೆ ಗಾಡಿಗಳಲ್ಲಿ ಕೂಡಿಸಿ ಮನೆಗೆ ಕಳುಹಿಸಿಬಿಟ್ಟರು.

ಅವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಲು ಕೊಲೆಗಡುಕರನ್ನು ಏರ್ಪಡಿಸಿಟ್ಟಿದ್ದರಷ್ಟೆ ? ಇನ್ನು ಅದು ನಡೆಯಬಾರದಾಗಿತ್ತು. ಈಗ ಅವರಿಬ್ಬರೂ ಪ್ರಾಣ ಸ್ನೇಹಿತರು.

ಭೂಪತಿ ಶ್ರೀಪತಿಯೊಂದಿಗೆ ತನ್ನ ದುಷ್ಟ ಗುಟ್ಟನ್ನು ಹೇಳದೆ, "ಒಂದು ಅಗತ್ಯ ಕೆಲಸ ಇದೆ" ಎಂದಷ್ಟೇ ಹೇಳಿ ಆಲದ ಮರದ ಪ್ರಾಂತಕ್ಕೆ ಅತಿವೇಗವಾಗಿ ಹೋದನು. ಶ್ರೀಪತಿ ಕೂಡಾ ಇನ್ನೊಂದು ದಾರಿಯಿಂದ ಕೆರೆಯ ದಂಡೆಯ ಕಡೆಗೆ ಬೀಸುಗಾಲು ಹಾಕಿ ಸಾಗಿದನು.

ಭೂಪತಿ ತೇಕುತ್ತಾ ಆಲದ ಮರದ ಹತ್ತಿರ ಬಂದು ಅಲ್ಲಿದ್ದ ಕೊಲೆಗಡುಕರನ್ನು ಆ ಕಾರ್ಯದಿಂದ ನಿವಾರಿಸಿ ಅಲ್ಲಿಂದ ಕಳುಹಿಸಿಬಿಟ್ಟನು.

ಅದೇ ವಿಧವಾಗಿ ಶ್ರೀಪತಿ ಕೂಡಾ ಕೆರೆಯ ದಂಡೆಯ ಹತ್ತಿರ ಅಡಗಿರುವ ಕೊಲೆಗಡುಕರನ್ನೂ ಕಳುಹಿಸಿಬಿಟ್ಟನು.

ಆ ಮೇಲೆ ಸ್ನೇಹಿತರಿಬ್ಬರೂ ಕ್ಷೇಮವಾಗಿಯೇ ತಮ್ಮ ತಮ್ಮ ಮನೆ ಸೇರಿದರು. ಅವರು ತಮ್ಮ ನಡುವೆ ಉಂಟಾಗಿ ವಿಶ್ವರೂಪವೆದ್ದ ವಿರೋಧವನ್ನು ಕುರಿತು ಆಲೋಚಿಸುವಾಗ ಅದೊಂದು ಕೆಟ್ಟಸ್ವಪ್ನವಾಗಿ ತೋರಿತು. ಮರುದಿನ ಅವರು ಬೀದಿಯಲ್ಲಿ ಕಲೆತುಕೊಂಡಾಗ ತಾವು ತಲೆ ಹಾಕಿದ ದುರ್ಮಾರ್ಗವನ್ನು ಕುರಿತು ಒಬ್ಬರಿಗೊಬ್ಬರು ಹೇಳಿಕೊಂಡು ಕ್ಷಮೆ ಕೇಳಿಕೊಂಡರು. ಅಂತೂ ಅವರ ಸ್ನೇಹಭಾವದಲ್ಲಿ ಯಾವ ಬದಲಾವಣೆಯೂ ಬರಲಿಲ್ಲ. ಮಕ್ಕಳ ಡೇರೆಯಲ್ಲಿ ಪ್ರವೇಶಿಸುವುದಕ್ಕೆ ಮೊದಲು ನಡೆದುದೆಲ್ಲ ಅವರಿಗೆ ಅವಾಸ್ತವವಾಗಿ ತೋರಿತು. ಅವರು ಬದುಕಿರುವವರೆಗೂ ಆದರ್ಶಸ್ನೇಹಿತರಾಗಿಯೇ ಇದ್ದರು. ಬಾಲ್ಯದ ನೆನಪೆಂದರೆ ಅಂತಹದು.



# ನಡೆಯದ ರೂಪಾಯಿ

ಅಂಗಡಿ ಗೋಪಣ್ಣವರು ಮನಸ್ಸಿನೊಳಗೇ ಶಾಪಹಾಕಿಕೊಳ್ಳುತ್ತಿದ್ದರು.

ಯಾವನೋ ನಡೆಯದ ರೂಪಾಯಿ ಕೊಟ್ಟು ಬೆಲ್ಲ ಕೊಂಡುಕೊಂಡು ಹೋಗಿದ್ದ. ಕೆಲಸದ ಗಡಿಬಿಡಿಯಲ್ಲಿ ಗೊತ್ತಾಗದೆ ಹೋಗಿತ್ತು.

ಇದ್ದಕ್ಕಿದ್ದ ಹಾಗೆ ಗೋಪಣ್ಣವರು ಮೆಟ್ಟಿಬಿದ್ದರು.

ಅಂಗಡಿ ಮುಂದೆ ಒಬ್ಬ ಭಿಕ್ಷುಕ ಬಗ್ಗಿ ಏನೋ ಒಂದು ವಸ್ತುವನ್ನು ಜೇಬಿಗಿಳಿಸಿಕೊಳ್ಳುವಾಗ ಅದು ಒಂದು ರೂಪಾಯಿ ನಾಣ್ಯವೆಂದು ತಿಳಿಯಿತು.

" ಆ ರೂಪಾಯಿ ನನ್ನದು, ಇಲ್ಲಿ ಕೊಡಿ " ಎಂದರು ಗೋಪಣ್ಣವರು.

" ಧರ್ಮ ಪ್ರಭುಗಳು! ಸುಳ್ಳು ಹೇಳಬಾರದು " ಎಂದ ಭಿಕ್ಷುಕ. ಗೋಪಣ್ಣವರು ಅವನೊಂದಿಗೆ ಸ್ವಲ್ಪ ಚೌಕಾಸಿ ಮಾಡಿ, ತಾನು ಅರ್ಧ ರೂಪಾಯಿ ಕೊಟ್ಟರೆ ಭಿಕ್ಷುಕ ರೂಪಾಯಿ ಕೊಡುವಂತೆ ರಾಜೀ ಮಾಡಿಕೊಂಡರು. ಗೋಪಣ್ಣವರು ಅರ್ಧ ರೂಪಾಯಿ ಭಿಕ್ಷುಕನಿಗೆ ಕೊಟ್ಟು, ಅವನು ತನ್ನ ಜೇಬಿನಿಂದ ತೆಗೆದುಕೊಟ್ಟ ರೂಪಾಯಿಯನ್ನು ತೆಗೆದುಕೊಂಡು ಅವನನ್ನು ಕಳುಹಿಸಿದರು.

ಅಷ್ಟರಲ್ಲಿ ಗೋಪಣ್ಣವರ ಹೆಂಡತಿ ಹೊರಗೆ ಬಂದು ಅಂಗಡಿಯ ಮುಂದೆ ಏನನ್ನೋ ಹುಡುಕತೊಡಗಿದಳು. " ಏನದು ? " ಎಂದು ಕೇಳಿದರು ಗೋಪಣ್ಣವರು. ಅವರ ಮಗ ಸಾಮಾನು ತರುವಾಗ ಅಲ್ಲೇ ಒಂದು ರೂಪಾಯಿ ಬಿಸಾಡಿದ್ದನಂತೆ.

ಗೋಪಣ್ಣವರ ಗುಂಡಿಗೆ ಜಾರಿಹೋಯಿತು. ಭಿಕ್ಷುಕನಿಗೆ ಅರ್ಧ ರೂಪಾಯಿ ಕೊಟ್ಟು ತನ್ನ ರೂಪಾಯಿಯನ್ನೇ ತಾನು ತೆಗೆದುಕೊಂಡದ್ದು.

ಜೇಬಿನಿಂದ ಆ ರೂಪಾಯಿಯನ್ನು ತೆಗೆದು ನೋಡಿದರು. ಅದು ಕೂಡಾ ಸೀಸದ ರೂಪಾಯಿ! ಬೆಳಗ್ಗೆ ಯಾರ ಮೂತಿ ನೋಡಿದೆನೋ ಎಂದುಕೊಂಡರು ಪಾಪ!



# ಹುಟ್ಟುಮಚ್ಚೆ

**ಬೀ**ರನೂ ಶಾರಿಯೂ ಗಂಡಹೆಂಡಿರಾಗಿದ್ದರು.

ಅವರಿಗೆ ಬಹಳ ಕಾಲದ ಮೇಲೆ ಒಬ್ಬ ಮಗ ಹುಟ್ಟಿದ. ಮಗುವಿನ ಹಣೆಯ ಮೇಲೆ ಹುಣಿಸೆ ಬೀಜದಷ್ಟು ಹುಟ್ಟುಮಚ್ಚೆಯೊಂದಿತ್ತು.

ಗಂಡಹೆಂಡಿರಿಬ್ಬರಿಗೂ ಹುಟ್ಟುಮಚ್ಚೆಯ ವಿಷಯ ಗೊತ್ತಿತ್ತು. "ನೋಡಿದೆಯೇನೇ! ನಮ್ಮ ಮಗನಿಗೆ ರಾಜಯೋಗ ಬರುತ್ತೆ. ಈ ಹುಟ್ಟುಮಚ್ಚೆ ನೋಡು!" ಎಂದ ಬೀರ.

ಅದು ರಾಜಯೋಗಕ್ಕೆ ಸಂಬಂಧಿಸಿದ ಹುಟ್ಟುಮಚ್ಚೆ ಅಲ್ಲವೆಂದೂ ಮಹಾವಿದ್ವಾಂಸನ ಲಕ್ಷಣವೆಂದೂ ಶಾರಿ ವಾದಿಸಿದಳು. ತಾನು ಹೇಳಿದ್ದೇ ಸರಿ ಎಂದ ಬೀರ.

ಇಬ್ಬರ ನಡುವಿನ ಅಭಿಪ್ರಾಯ ಭೇದವು ಅವರಿಬ್ಬರೊಳಗೆ ಹೊಡೆದಾಟವಾಗುವ ವರೆಗೆ ಮುಟ್ಟಿತು. ಅಷ್ಟರಲ್ಲಿ ಭಿಕ್ಷುಕನೊಬ್ಬ "ಅಮ್ಮಾ, ಧರ್ಮತಾಯಿ!" ಎಂದು ಆರ್ತನಾದ ಮಾಡಿದ.

ಗಂಡಹೆಂಡಿರಿಬ್ಬರೂ ಅವನ ಕಡೆಗೆ ನೋಡಿ ಮರಗಟ್ಟಿ ನಿಂತರು. ಕಾರಣ, ಅವನ ಹಣೆಯಲ್ಲಿ ಹುಣಸೇ ಬೀಜದಷ್ಟು, ಹುಟ್ಟುಮಚ್ಚೆ ಇದ್ದಿತು!





# ಸಮುದ್ರಮಥನ

ದೇವದಾನವರ ಯುದ್ಧವು ದೀರ್ಘ ಕಾಲದಿಂದ ನಡೆಯುತ್ತಿತ್ತು. ತಾವು ಅಮೃತವನ್ನು ಕುಡಿದು ಅಮರರಾದ ಹೊರತು ವಿಜಯಿಗಳಾಗಲಾರೆವೆಂದು ದೇವತೆಗಳಿಗೆ ತೋರಿತು. ಅವರು ಅಮೃತವನ್ನು ಮೇರು ಪರ್ವತ ಪ್ರಾಂತದಲ್ಲಿ ಹುಡುಕತೊಡಗಿದರು.



ಎಷ್ಟು ಹುಡುಕಿದರೂ ಅವರಿಗೆ ಅಮೃತದ ಜಾಡು ತಿಳಿಯಲಿಲ್ಲ. ಕಡೆಗೆ ಬ್ರಹ್ಮನು ಅವರೊಂದಿಗೆ, ಸಮುದ್ರವನ್ನು ಕಡೆದರೆ ಹೊರತು ಅಮೃತವು ಸಿಗಲಾರದೆಂದು ಹೇಳಿಬಿಟ್ಟನು. ದಾನವರು ಸಹಾಯ ಮಾಡಿದ ಹೊರತು ಸಮುದ್ರಮಥನವು ಸಾಧ್ಯವಾಗದು.



ಅಮೃತವನ್ನು ಪಡೆಯುವ ಸಲುವಾಗಿ ದಾನವರು ದೇವತೆಗಳಿಗೆ ಸಹಾಯ ಮಾಡಲು ಒಪ್ಪಿದರು. ಕಡೆಯಲು ಕಡಗೋಲಾಗಿ ಮಂದರ ಪರ್ವತವನ್ನು ಉಪಯೋಗಿಸಬೇಕೆಂದು ನಿಶ್ಚಯವಾಯಿತು. ಕಡೆಯುವ ಹಗ್ಗವಾಗಿರಬೇಕೆಂದು ನಾಗರಾಜನಾದ ವಾಸುಕಿಯನ್ನು ಕೇಳಿಕೊಂಡರು. ವಾಸುಕಿ ಒಪ್ಪಿದನು.



ಕಡೆಯುವಾಗ ವಿಷ್ಣು ಆಮೆಯ ರೂಪ ತಾಳಿ ಪರ್ವತವು ತೇಲುವಂತೆ ಹೊತ್ತುಕೊಳ್ಳದಿದ್ದರೆ ಅದು ಮುಳುಗಿಹೋಗುತ್ತಿತು. ದಾನವರು ವಾಸುಕಿಯ ತಲೆಯ ಭಾಗವನ್ನೂ, ದೇವತೆಗಳು ಬಾಲದ ಭಾಗವನ್ನೂ ಹಿಡಿದು ಒಂದು ಯುಗದ ವರೆಗೆ ಸಮುದ್ರವನ್ನು ಕಡೆದರು.



ಬೇಗದಲ್ಲೇ ವಾಸುಕಿಯ ಬಾಯಿಯಿಂದ ವಿಷ ಜ್ವಾಲೆಗಳು ಎಲ್ಲಾ ಕಡೆಗೂ ವ್ಯಾಪಿಸಿ ಲೋಕವೇ ನಾಶವಾಗುವ ಸ್ಥಿತಿ ಬಂತು. ಆಗ ದೇವತೆಗಳು ಶಿವನನ್ನು ಪ್ರಾರ್ಥಿಸಲು, ಶಿವನು ಆ ಹಾಲಾಹಲ ವಿಷವನ್ನು ತನ್ನ ಕಂಠದ ವರೆಗೆ ನುಂಗಿ ನೀಲಕಂಠ ನೆಂದು ಖ್ಯಾತನಾದನು.



ತರುವಾಯ ಸಮುದ್ರದಿಂದ ಒಂದೊಂದಾಗಿ ಅನೇಕ ವಸ್ತುಗಳು ಹುಟ್ಟಿಕೊಂಡುಬಂದುವು. ಚಂದ್ರ, ಲಕ್ಷ್ಮೀದೇವಿ, ಐರಾವತವೆಂಬ ಬಿಳಿಯಾನೆ ಹುಟ್ಟುತ್ತಿರಲು, ದೇವದಾನವರು ಇನ್ನೂ ಕಡೆ ಯುತ್ತಿದ್ದರು.



ಕಟ್ಟಕಡೆಗೆ ಅಮೃತಭಾಂಡವನ್ನು ಕೈಯಲ್ಲಿ ಹಿಡಿದುಕೊಂಡು ಧನ್ವಂತರಿ ಸಮುದ್ರದಿಂದ ಹುಟ್ಟಿಬಂದನು. ಈತನೇ ದೇವತೆಗಳ ವೈದ್ಯ. ಅಲ್ಲಿಗೆ ಸಮುದ್ರಮಥನವು ಜಯಪ್ರದವಾಗಿ ನೆರವೇರಿತು.



ದಾನವರು ಆತುರದಿಂದ ಅಮೃತಕ್ಕಾಗಿ ಕೈ ಚಾಚುತ್ತ ಮುಂದೆ ಬಂದರು. ಎಚ್ಚರಿಕೆಯಲ್ಲಿದ್ದ ದೇವತೆಗಳು ಅಮೃತವು ದಾನವರ ಕೈಗೆ ಸಿಗದಂತೆ ಮಾಡಲು ಪ್ರಯತ್ನಿಸಿದರು. ಈ ವಿಷಯವಾಗಿ ದೇವದಾನವರು ತಮ್ಮೊಳಗೆ ಘರ್ಷಣೆ ಮಾಡಿಕೊಂಡಿರುವಾಗ, ನಿಸ್ಸಹಾಯಕನಾದ ಧನ್ವಂತರಿ ನೋಡುತ್ತಾ ನಿಂತನು.



ಅಕಸ್ಮಾತ್ತಾಗಿ ಅಲ್ಲಿ ಒಬ್ಬಳು ಅಪೂರ್ವ ಸೌಂದರ್ಯವತಿ ಪ್ರತ್ಯಕ್ಷಳಾದಳು. ಇಕ್ಕಡೆಯವರೂ ಅವಳನ್ನು ನೋಡುತ್ತ ಘರ್ಷಣೆಬಿಟ್ಟು ನಿಂತರು. ಅವಳು ಉಭಯಪಕ್ಷದವರಿಗೂ ತಾನೇ ಅಮೃತವನ್ನು ಹಂಚಿಕೊಂಡುವೆನೆಂದಳು. ಅವಳ ಸೌಂದರ್ಯಕ್ಕೆ ಮೋಹಿತರಾದ ದಾನವರು ಅದಕ್ಕೆ ಸಮ್ಮತಿಸಿದರು.



ಹಾಗೆ ಮೋಹಿನೀ ರೂಪದಲ್ಲಿ ಬಂದವನು ವಿಷ್ಣುವೇ. ದಾನವರು ಅಮೃತ ಕುಡಿದು ಅಮರರಾಗಿಬಿಟ್ಟರೆ, ಆದರಿಂದ ಮದವೂ ಅನ್ಯಾಯಗಳೂ ಹೆಚ್ಚಾಗಿ ಪ್ರಪಂಚವು ನರಕವಾಗಿ ಮಾರ್ಪಡುತ್ತದೆಂದು ವಿಷ್ಣುವಿಗೆ ಗೊತ್ತು. ಮೋಹಿನಿ ದೇವತೆಗಳಿಗೆ ಅಮೃತವನ್ನು ನೀಡತೊಡಗಿದಳು.



ರಾಹು ಎಂಬ ದಾನವನು ಮೋಹಿನಿಯ ಮೇಲೆ ಸಂದೇಹಪಟ್ಟು, ದೇವತೆಯ ರೂಪದಲ್ಲಿ ಬಂದು. ತನ್ನ ಭಾಗದ ಅಮೃತವನ್ನು ತೆಗೆದುಕೊಂಡನು. ಆಗಲೇ ಈ ಮೋಸವನ್ನು ತಿಳಿದ ವಿಷ್ಣು, ಅಮೃತವು ರಾಹುವಿನ ಕಂಠದಲ್ಲಿ ಇಳಿಯುವುದರೊಳಗೆ ತನ್ನ ಸುದರ್ಶನ ಚಕ್ರದಿಂದ ರಾಹುವಿನ ತಲೆ ಕಡಿದನು.



ದಾನವರು ಮೋಸವನ್ನು ತಿಳಿಯುವುದರೊಳಗೇ ಎಲ್ಲಾ ಮೀರಿಹೋಗಿತ್ತು. ಅವರಿಗೆ ಅಮೃತ ಉಳಿದಿರಲಿಲ್ಲ. ದೇವತೆಗಳು ಮಾತ್ರವೇ " ಅಮರ " ರಾದರು. ಆಮೇಲೆ ದೇವತೆಗಳು ವೀರೋಚಿತವಾಗಿ ಹೋರಾಡಿ ದಾನವರು ದುರಾಕ್ರಮಣ ಮಾಡಿದ ಸ್ಥಳದಿಂದ ಅವರನ್ನು ಓಡಿಸಿದರು.



# ಭಟರ ಮುಷ್ಕರ

ಒಂದು ಕಾಲದಲ್ಲಿ ಕೋಸಲದೇಶವು ಧರ್ಮವು ನಾಲ್ಕು ಪಾದಗಳಿಂದಲೂ ನಿಂತ ದೇಶವೆಂದು ಹೆಸರು ಪಡೆದಿತ್ತು. ಅಂತಹ ರಾಜ್ಯದಲ್ಲಿ ಇದ್ದಕ್ಕಿದ್ದ ಹಾಗೆ ಭಾರಿಭಾರಿ ಕಳ್ಳತನಗಳಾಗಲು ಪ್ರಾರಂಭವಾದುವು. ಇದನ್ನು ನೋಡಿ ರಾಜನಿಗೆ ತುಂಬ ಯೋಚನೆಗಿಟ್ಟು ಕೊಂಡಿತು. ಕಳ್ಳರನ್ನು ಹಿಡಿಯಲು ಸೈನ್ಯವನ್ನು ಉಪಯೋಗಿಸಬೇಕೆಂದರೆ, ದೇಶಕ್ಕೆ ಯುದ್ಧ ಭಯವು ಹೆಚ್ಚಾಗಿದ್ದಿತು. ಕಡೆಗೆ ರಾಜನು ಮಂತ್ರಿಯೊಡನೆ ಆಲೋಚನೆ ಮಾಡಿ ಒಂದು ರಕ್ಷಕಭಟರ ದಳವನ್ನು ಕೂಡಿಸಿದನು. ಆ ರಕ್ಷಕಭಟರ ಕೆಲಸವೇನೆಂದರೆ ಕಳ್ಳರನ್ನು ಅನ್ವೇಷಿಸ ತಕ್ಕದ್ದು, ಮತ್ತು ಹಿಡಿಯ ತಕ್ಕದ್ದು.

ಈ ಪ್ರತ್ಯೇಕ ರಕ್ಷಕಭಟರು ಕಾರ್ಯರಂಗಕ್ಕೆ ಇಳಿದ ಕೂಡಲೇ ಕಳ್ಳತನ ಕಡಮೆಯಾಗುತ್ತಾ ಹೋಯಿತು. ಒಂದೆರಡು ವರ್ಷಗಳವರೆಗೆ ದೇಶದಲ್ಲಿ ಸುಖಶಾಂತಿ ನೆಲೆಸಿತು. ಆದರೆ ಆಮೇಲೆ ಕಳ್ಳ ತನಗಳು ಪ್ರಾರಂಭ ವಾಗಿ, ದಿನೇ ದಿನೇ ಹೆಚ್ಚಾಗಲೂ ತೊಡಗಿತು. ಪ್ರತ್ಯೇಕ ಭಟರಿಂದ ಆ ಕಳ್ಳತನಗಳನ್ನು ನಿಲ್ಲಿಸಲು ಸಾಧ್ಯವಾಗಲಿಲ್ಲ. ಕಳ್ಳರ ಕಾಟಕ್ಕೆ ಗುರಿಯಾದವರು ರಕ್ಷಕಭಟರ ನಾಯಕನಿಗೆ ಎಷ್ಟು ಬಿನ್ನಹಗಳನ್ನು ಮಾಡಿಕೊಂಡರೂ ಪ್ರಯೋಜನವಿಲ್ಲದೆ ಹೋಯಿತು. ಹೀಗಾಗಲು ಕಾರಣವೇನೆಂದು ಅನೇಕರು ಕೇಳಿ ಕೊಳ್ಳುತ್ತಿದ್ದರು. ಅದಕ್ಕೆ ಉತ್ತರವಾಗಿ ಕೆಲವರು ಈ ಬಗೆಯ ಸಮಾಧಾನ ಹೇಳುತ್ತಿದ್ದರು: ರಕ್ಷಕಭಟರು ಕಳ್ಳರಿಂದ ಲಂಚ ತೆಗೆದುಕೊಂಡು, ಅವರನ್ನು ಹಿಡಿಯದೆ ಬಿಡುತ್ತಿದ್ದಾರಂತೆ. ಈ ಮಾತು ನಿಜ ವೆಂಬಂತೆ ಕೆಲವರು ಬಹಿರಂಗವಾಗಿಯೇ ಹೇಳಲು ತೊಡಗಿದರು.

ರಕ್ಷಕಭಟರ ದಳನಾಯಕನಿಗೆ ಪ್ರಜೆಗಳು ತಮ್ಮನ್ನು ಕುರಿತು ಹೇಳುವ ಮಾತು ಅವಮಾನಕರವಾಗಿ ತೋರಿತು. ಅವನು ರಾಜನ ಬಳಿಗೆ ಹೋಗಿ ಪ್ರಜೆಗಳ ಪುಕಾರನ್ನು ಕುರಿತು ದೂರಿಕೊಂಡನು.

ಅದಕ್ಕೆ ರಾಜನು ಅವನೊಂದಿಗೆ, "ಕಳ್ಳರನ್ನು ಹಿಡಿಯಬೇಕೆಂದಲ್ಲವೇ ನಿಮ್ಮನ್ನು ನಿಯಮಿಸಿದ್ದು? ಆದರೆ ದೇಶದಲ್ಲಿ ಕಳ್ಳತನಗಳು ನಡೆಯುತ್ತಲೇ ಇವೆಯಲ್ಲ? ಆದುದರಿಂದ ಪ್ರಜೆಗಳು ಹೇಳುವುದು ನಿಜವಾಗಿರಬೇಕು; ಅಥವಾ ನೀವು ಅಸಮರ್ಥರಾಗಿ ಯಾದರೂ ಇರಬೇಕು!" ಎಂದು ಹೀಯಾಳಿಸಿ ಕಳುಹಿಸಿಬಿಟ್ಟನು.

ಜಿ. ರಾಮಲಕ್ಷ್ಮಿ

ಇದು ರಕ್ಷಕಭಟರಿಗೆ ಇನ್ನಷ್ಟು ಅವಮಾನವಾಗಿ ಹೋಯಿತು. ಎಲ್ಲರೂ ಕೂಡಿ ದೊಡ್ಡ ರೀತಿಯಲ್ಲಿ ಮುಷ್ಕರ ಮಾಡಬೇಕೆಂದೂ, ಕೆಲಸವೇ ಮಾಡಬಾರದೆಂದೂ ಅಂದುಕೊಂಡರು. ಈ ಸಂಗತಿ ತಿಳಿದು ಅತ್ತ ರಾಜನೂ ಇತ್ತ ಪ್ರಜೆಗಳೂ ಕೂಡಾ ಹೆದರಿದರು. ಏಕೆಂದರೆ 'ರಕ್ಷಕಭಟರು ಮುಷ್ಕರ ಮಾಡುವರೆಂದರೆ ಕಳ್ಳರಿಗೆ ಇನ್ನಷ್ಟು ಸಲೀಸಾಯಿತಷ್ಟೆ? ಸಿಕ್ಕಾ ಬಟ್ಟೆ ಕಳ್ಳತನವಾದೀತಲ್ಲವೆ?

ತಾವು ದೇಶಕ್ಕೆ ಮಾಡುವ ಸೇವೆಯನ್ನು ಕುರಿತು ರಾಜನು ಪ್ರಜೆಗಳೆಲ್ಲರ ಮುಂದೆ ಬಹಿರಂಗವಾಗಿ ಪ್ರಶಂಸಿದ ಹೊರತು, ತಾವು ಮುಷ್ಕರವನ್ನು ಬಿಡಲಾರೆವೆಂದು ರಕ್ಷಕಭಟರು ಹೇಳಿಬಿಟ್ಟರು. ರಾಜನಿಗೆ ಆಲೋಚನೆ ಹಿಡಿಯಿತು. ಅವಸರಪಟ್ಟು ಮುಷ್ಕರ ಮಾಡಬೇಡಿರೆಂದೂ, ತನಗೆ ಯೋಚಿಸಲು ಸ್ವಲ್ಪ ಕಾಲಾವಧಿ ಬೇಕೆಂದೂ ಹೇಳಿದನು. ಆದರೆ ರಕ್ಷಕಭಟರು ಮನೆಬಿಟ್ಟು ಕದಲಲಿಲ್ಲ. ಹೀಗೆ ಒಂದು ತಿಂಗಳು ಕಳೆದ ಮೇಲೆ, ರಾಜನಿಗೆ ಪ್ರಜಾಕ್ಷೇಮದ ದೃಷ್ಟಿಯಿಂದ ರಕ್ಷಕಭಟರ ಷರತ್ತಿಗೆ ಒಪ್ಪಿಕೊಳ್ಳುವುದೇ ಉಚಿತವೆನಿಸಿತು.

ಅಷ್ಟರಲ್ಲಿ ಕೆಲವು ಮಂದಿ ಪ್ರಜಾಪ್ರಮುಖರು ರಾಜನ ಬಳಿಗೆ ಬಂದು, "ಮಹಾರಾಜರೆ, ನೀವು ರಕ್ಷಕಭಟರ ಮುಷ್ಕರವನ್ನು ಕುರಿತು ಚಿಂತಿಸಬೇಕಾಗಿಲ್ಲ. ಅವರನ್ನು ಬಹಿರಂಗವಾಗಿ ನೀವು ಹೊಗಳಬೇಕಾಗಿಯೂ ಇಲ್ಲ" ಎಂದರು.

"ಏಕೆ ಹೀಗೆ ಹೇಳುವಿರಿ?" ಎಂದು ರಾಜನು ಕೇಳಿದನು. "ಅವರು ಮುಷ್ಕರ ಪ್ರಾರಂಭಿಸಿದಂದಿನಿಂದ ದೇಶದಲ್ಲೆಲ್ಲಿಯೂ ಕಳ್ಳತನಗಳೇ ನಡೆದಿಲ್ಲ. ಪೂರ್ತಿನಿಂತಿದೆ" ಎಂದರು ಪ್ರಜಾಪ್ರಮುಖರು.

ರಾಜನು ಆಶ್ಚರ್ಯಪಟ್ಟು ಹೆಚ್ಚಿನ ವಿಚಾರಣೆ ನಡೆಸಿದಾಗ, ನಿಜ ಸಂಗತಿ ತಿಳಿಯಿತು. ದೇಶದಲ್ಲಿದ್ದ ಕಳ್ಳರೆಲ್ಲರೂ ಎಂದೋ ಬದಲಾಯಿಸಿಬಿಟ್ಟಿದ್ದರು. ರಕ್ಷಕಭಟರಲ್ಲಿಯೇ ಕೆಲವರು ಕಳ್ಳತನ ಮಾಡಲು ಪ್ರಾರಂಭಿಸಿದ್ದಂತೆ.

ಕಡೆಗೆ ರಾಜನು ರಕ್ಷಕಭಟರನ್ನೇ ತರಾಟೆಗೆ ತೆಗೆದುಕೊಂಡನು. ತಾವು ಪ್ರಾರಂಭಿಸಿದ ಮುಷ್ಕರ ತಮ್ಮ ತಪ್ಪನ್ನೇ ಬಹಿರಂಗಪಡಿಸಿದುದರಿಂದ, ರಕ್ಷಕಭಟರ ದಳನಾಯಕನು ನಾಚಿಕೊಂಡು ರಾಜನ ಕಾಲಿಗೆ ಬಿದ್ದು ಕ್ಷಮೆ ಬೇಡಿದನು.

ರಾಜನು ಆಗಿನಿಂದ ರಕ್ಷಕಭಟರ ಅಧಿಕಾರವನ್ನು ತಗ್ಗಿಸಿ ಅವರ ಮೇಲೆ ದೃಷ್ಟಿ ಇಡುವಂತೆ ಇನ್ನೊಬ್ಬನನ್ನು ಏರ್ಪಡಿಸಿದನು. ಏಕೆಂದರೆ ಅನೀತಿ ಅನ್ಯಾಯಗಳಿಗೆ ಕೊನೆಯ ಪರಿಷ್ಕಾರವೆಂಬುದೇನಿಲ್ಲ. ಆಗಾಗ ಅವುಗಳಿಗೆ ಹೊಸ ಪರಿಷ್ಕಾರಮಾರ್ಗ ಹುಡುಕಲೇಬೇಕಾಗುತ್ತದೆ!



# ಎಟಕುವ ಹಾಗೆ

**ವೈ**ದ್ಯಚಂದ್ರಣ್ಣನೆಂಬವರು ಯಾವ ಊರಿನಿಂದಲೋ ಬಂದು ಜಮೀನ್ದಾರರ ಮನೆಯ ಪಕ್ಕದಲ್ಲೇ ಬಿಡಾರ ಹೂಡಿ, ವೈದ್ಯವೃತ್ತಿ ಸಾಗಿಸುತ್ತಿದ್ದರು.

ಬೇಗದಲ್ಲೇ ಜಮೀನ್ದಾರರಿಗೂ ಚಂದ್ರಣ್ಣನಿಗೂ ಒಳ್ಳೆಯ ಸ್ನೇಹವಾಯಿತು. ಜಮೀನ್ದಾರರಿಗೆ ಅಸ್ವಸ್ಥವಾದಾಗಲೆಲ್ಲಾ ಚಂದ್ರಣ್ಣನೇ ವೈದ್ಯಮಾಡುತ್ತಿದ್ದರು.

ಒಂದು ದಿನ ಜಮೀನ್ದಾರರು ವೈದ್ಯಚಂದ್ರಣ್ಣನೊಂದಿಗೆ, "ಯಾಕೋ ಈ ನಡುವೆ ನನಗೆ ಆಗಾಗ ಅಸ್ವಸ್ಥತೆ ಬರುತ್ತದಲ್ಲ ? ಕಾರಣವೇನು ?" ಎಂದು ಕೇಳಿದರು.

ಚಂದ್ರಣ್ಣ ಜಮೀನ್ದಾರರಿಗೆ ಏನೋ ಹಾರಿಕೆಯ ಸಮಾಧಾನ ಹೇಳಿ, ಮರುದಿವಸ ಆ ಊರಿನಿಂದ ಹೊರಟು ಪಕ್ಕದ ಊರಿಗೆ ಹೋಗಿ ಅಲ್ಲಿ ಬೀಡುಬಿಡಲು ನಿರ್ಧರಿಸಿ, ಜಮೀನ್ದಾರರೊಂದಿಗೆ "ನಿಮಗೆ ಅಗತ್ಯ ಬಂದಾಗ, ಹೇಳಿ ಕಳಿಸಿರಿ. ಬರುತ್ತೇನೆ" ಎಂದರು.

ಅವರು ಹೊರಟುಹೋಗಿ ಅನೇಕ ದಿನಗಳಾದರೂ ಜಮೀನ್ದಾರರು ಅವರನ್ನು ಕರೆಯಲು ಜನ ಕಳುಹಿಸಲಿಲ್ಲ. ಬೇರೆ ವೈದ್ಯರನ್ನೂ ಕರೆಯಿಸಿಕೊಳ್ಳಲಿಲ್ಲ.

ಚಂದ್ರಣ್ಣ ಒಂದು ದಿನ ಜಮೀನ್ದಾರರನ್ನು ನೋಡಲು ಬಂದು, "ನನಗೆ ಸುದ್ದಿ ಕಳಿಸಲೇ ಇಲ್ಲ. ತಮ್ಮ ಆರೋಗ್ಯ ಚೆನ್ನಾಗಿದೆಯಷ್ಟೆ ?" ಎಂದು ಕೇಳಿದರು.

"ಸುದ್ದಿ ಕಳಿಸುವ ಅಗತ್ಯ ಬರಲಿಲ್ಲ" ಎಂದರು ಜಮೀನ್ದಾರರು.

"ಯಾರಿಗಾದರೂ ಅಷ್ಟೇ. ಎಟಕುವ ಹಾಗೆ ಇರುವುದರ ಮೇಲೆ ಅಗತ್ಯ ಹೆಚ್ಚಾಗುತ್ತದೆ !" ಎಂದರು ವೈದ್ಯಚಂದ್ರಣ್ಣ.





# ಬಣ್ಣ ಬದಲಾದ ಕೋಳಿ

ಒಂದಾನೊಂದು ಗ್ರಾಮದಲ್ಲಿ ಒಬ್ಬಳು ಮುದುಕಿ ಇದ್ದಳು. ಅವಳು ಒಂದು ಹುಂಜವನ್ನು ತುಂಬ ಅಕ್ಕರೆಯಿಂದ ಬೆಳೆಸಿಕೊಂಡಿದ್ದಳು. ಫಳಫಳನೆ ಬೆಳ್ಳಗಾಗಿರುವ ಆ ಕೋಳಿಯನ್ನು ಅವಳು ತನ್ನ ಪ್ರಾಣದಂತೆ ನೋಡುತ್ತಿದ್ದಳು. ಆ ಬೀದಿಯಲ್ಲಿರುವವರೆಲ್ಲರೂ ಅದರ ಚಂದವನ್ನು ನೋಡಿ ಮೆಚ್ಚಿ ಆನಂದಿಸಿಕೊಳ್ಳುತ್ತಿದ್ದರು.

ಒಂದು ದಿನ ಆ ಹುಂಜವು ದೀಪ ಹಚ್ಚುವ ಹೊತ್ತಾದರೂ ಮನೆಗೆ ಬರಲಿಲ್ಲ. ಮುದುಕಮ್ಮ ಅದನ್ನು ಹುಡುಕುತ್ತಾ ಎಲ್ಲರ ಮನೆಗೂ ಹೋಗಿ ತನ್ನ ಹುಂಜವನ್ನು ಕುರಿತು ಕೇಳಿದಳು. ಅವಳ ಹುಂಜ ಎಲ್ಲಿಗೆ ಹೋಯಿತೆಂದು ಯಾರಿಗೂ ಗೊತ್ತಿರಲಿಲ್ಲ. ಮುದುಕಿ ಪಾಪ, ಆ ರಾತ್ರಿ ಹೊಟ್ಟೆಗೇನೂ ತೆಗೆದುಕೊಳ್ಳದೆ ಉಪವಾಸಬಿದ್ದುಕೊಂಡಳು.

ನಡೆದ ಸಂಗತಿ ಏನೆಂದರೆ, ಮುದುಕಮ್ಮನ ಹುಂಜವು ನಾಲ್ಕು ಬೀದಿಗಳಾಚೆಗೆ ತುಂಬಾ ಕೋಳಿಗಳಿರುವುದನ್ನು ನೋಡಿ, ಅವುಗಳೊಂದಿಗೆ ಸೇರಿಕೊಂಡು ನೆಲಕೆದರಿ ಕುಟುಕುತ್ತಾ, ಸಂತೋಷದಿಂದ ಅಲ್ಲಿಯೇ ಇದ್ದುಬಿಟ್ಟಿತ್ತು.

ಆ ಕೋಳಿಗಳ ಒಡೆಯನಾದ ರಂಗಪ್ಪ ತನ್ನ ಕೋಳಿಗಳನ್ನೆಲ್ಲ ಗೂಡಿನೊಳಗೆ ಸೇರಿಸಲು ಕರೆದಾಗ, ಆ ಬಿಳೀಹುಂಜವನ್ನೂ ನೋಡಿದನು. ಚೆನ್ನಾಗಿ ಪುಷ್ಟಿಯಾದ ಆ ಹುಂಜವನ್ನು ನೋಡಿ ಅದನ್ನು ತಾನೇ ಇಟ್ಟುಕೊಳ್ಳಬೇಕೆಂದು ಅವನಿಗೆ ತೋರಿತು. ಅವನು ಆ ಹುಂಜದ ಮೇಲೆ ಪಚ್ಚೆ ರಂಗನ್ನು ಹಚ್ಚಿ ತನ್ನ ಕೋಳಿಯ ಗೂಡಿನೊಳಗೆ ಸೇರಿಸಿಟ್ಟನು.

ಆ ಹುಂಜವು ರಾತ್ರಿ ಪೂರಾ ಆ ಗೂಡಿನೊಳಗೇ ಇದ್ದು, ಮಾರುದಿನ ಬೆಳಿಗ್ಗೆ ರಂಗಪ್ಪನ ಮಗ ಗೂಡಿನ ಬಾಗಿಲು ತೆರೆದ ಕೂಡಲೇ ಅಲ್ಲಿಂದ ತಪ್ಪಿಸಿಕೊಂಡು ಓಡಿಹೋಯಿತು. ಸ್ವಲ್ಪಹೊತ್ತಿನ ಮೇಲೆ ಆ ಕೋಳಿ ತಪ್ಪಿಸಿಕೊಂಡು ಹೋದ ಸಂಗತಿ ರಂಗಪ್ಪನಿಗೆ ಗೊತ್ತಾಯಿತು. ಅವನು ಮಗನನ್ನು ಬಯ್ಯುತ್ತ ಕೋಳಿಯನ್ನು ಹುಡುಕುತ್ತ ಹೊರಟನು.

ಅಷ್ಟರಲ್ಲಿ ಆ ಹುಂಜವು ಬೊಂಬೆಗಳನ್ನು ತಯಾರಿಸುವವನಾದ ಗೋಪಾಲನ ಮಠಾರದೊಳಗೆ ನುಗ್ಗಿತು. ಆ ಗೋಪಾಲನು ಅದನ್ನು ನೋಡಿ, "ಆಹ! ಒಳ್ಳೇಹುಂಜ. ಸಂತೆಯಲ್ಲಿ ಮಾರಿದರೆ

ಹೇಳ್ ಗಾಲಿಟ್

ಒಳ್ಳೇಲಾಭ ಬರುತ್ತೆ" ಅಂದುಕೊಂಡು ಅದನ್ನು ಹಿಡಿದನು. ಅದರ ಒಡೆಯನಿಗೆ ಗುರುತು ತಿಳಿಯ ಬಾರದೆಂದು, ಅದರ ಮೇಲೆ ಬಿಳೀಬಣ್ಣ ಹಚ್ಚಿ, ಗೂಟಕ್ಕೆ ಕಟ್ಟಿ, ಅದರ ಮುಂದಿಷ್ಟು ಕಾಳು ಚೆಲ್ಲಿ, ನಿಶ್ಚಿಂತೆಯಿಂದ ತನ್ನ ಬೊಂಬೆ ಮಾಡುವ ಕೆಲಸಕ್ಕೆ ತೊಡಗಿದನು.

ಬೆಳಗಾದ ಕೂಡಲೇ ಮುದುಕಮ್ಮ ತನ್ನ ಕೋಳಿಯನ್ನು ಹುಡುಕುತ್ತಾ ತಿರುಗುತ್ತಿದ್ದಳು. ಅವಳೊಂದಿಗೆ ಅವಳ ಬೀದಿಯ ನಾಲ್ಕೈದು ಜನರೂ ಇದ್ದರು. ಮುದುಕಮ್ಮ ತಿರುಗುತ್ತ ಗೋಪಾಲನ ಬೀದಿಗೆ ಬಂದು ಅವನ ಮನೆಯ ಮುಂದಿರುವ ಬಿಳೀಹುಂಜವನ್ನು ನೋಡಿದಳು. ಅವಳೊಂದಿಗಿದ್ದ ಇತರರೂ ಆ ಹುಂಜವೇ ಮುದುಕಮ್ಮನದೆಂದು ಗುರುತಿಸಿದರು. ಗೋಪಾಲ ಅದು ತನ್ನ ಹುಂಜವೆನ್ನಲು ಮುದುಕಮ್ಮನ ಕಡೆಯವರಿಗೂ ಗೋಪಾಲನಿಗೂ ತಕರಾರು ಎದ್ದಿತು.

ಆಗ ಆ ದಾರಿಯಾಗಿ ಬರುತ್ತಿದ್ದ ಪಟೇಲರು ಅಲ್ಲಿ ನಿಂತು "ಏನು ಗಲಾಟೆ?" ಎಂದು ಮುದುಕಿಯನ್ನು ಕೇಳಿದರು. ತನ್ನ ಬಿಳೀಕೋಳಿಯನ್ನು ಬೊಂಬೇಗೋಪಾಲ ಎತ್ತಿಕೊಂಡು ಬಂದು ತನ್ನದೆಂದು ಹೇಳುತ್ತಾನೆಂದು ಮುದುಕಮ್ಮನೆಂದಳು. ಅವಳೊಂದಿಗಿದ್ದವರು ಕೂಡಾ ಅದು ಮುದುಕಮ್ಮನದೇ ಕೋಳಿ ಎಂದು ಸಾಕ್ಷಿ ಹೇಳಿದರು.

ಆಗ ಗೋಪಾಲನು ಪಟೇಲರಿಗೆ ನಮಸ್ಕಾರ ಮಾಡಿ, "ಸ್ವಾಮಿ, ಈ ಹುಂಜದ ಬಣ್ಣ ನೋಡಿ ಇವರೆಲ್ಲ ಹೀಗೆ ಹೇಳುತ್ತಾರೆ. ನಿಜಕ್ಕೂ ಇದು ಬಿಳೀ ಕೋಳಿಯಲ್ಲ; ಪಚ್ಚೆ ಬಣ್ಣದ ಕೋಳಿ. ನಾನು ಕುಶಾಲಿಗಾಗಿ ಅದಕ್ಕೆ ಬಿಳೀ ಬಣ್ಣ ಹಚ್ಚಿದ್ದೇನೆ. ಅಷ್ಟೇ" ಎಂದನು.

ಆಗ ಅಲ್ಲಿ ಕೂಡಿದ ಜನರ ಗುಂಪಿನಲ್ಲಿ ಹುಂಜವನ್ನು ಹುಡುಕುತ್ತಾ ಬಂದಿದ್ದ ರಂಗಪ್ಪನೂ ಇದ್ದ.



ಪಚ್ಚೇ ಕೋಳಿ ಎಂಬ ಮಾತು ಕೇಳಿದ ಕೂಡಲೇ ಅವನು ಮುಂದೆ ಬಂದು, "ಪಟೇಲರೇ, ಪಚ್ಚೇ ಕೋಳಿಯಾದರೆ ಆ ಹುಂಜ ನನ್ನದೇ. ಬೆಳಗ್ಗಿನಿಂದಲೇ ನಾನು ಅದಕ್ಕಾಗಿ ಹುಡುಕುತ್ತಾ ಇದ್ದೇನೆ. ತಾವು ಅದನ್ನು ನನಗೇ ಕೊಡಿಸಬೇಕು" ಎಂದನು.

"ಎಲೋ ಗೋಪಾಲ! ಬಣ್ಣ ಹಚ್ಚಿದೆನೆಂದು ಒಪ್ಪಿದ್ದೀಯಾ! ಇನ್ನೊಬ್ಬರ ಕೋಳಿಯನ್ನು ಕದ್ದು ಅದಕ್ಕೆ ಬಣ್ಣ ಹಚ್ಚಿದ ತಪ್ಪಿಗೆ ನಿನಗೆ ಇಪ್ಪತ್ತು ರೂಪಾಯಿ ಜುಲ್ಮಾನೆ ಹಾಕುತ್ತೇನೆ!" ಎಂದರು ಪಟೇಲರು.

ರಂಗಪ್ಪ ಆ ಹುಂಜವನ್ನು ಎತ್ತಿಕೊಳ್ಳಲು ನೋಡಿದನು, ಅಷ್ಟರೊಳಗೆ ಮುದುಕಮ್ಮ ಅದನ್ನು ಹಿಡಿದುಕೊಂಡು, "ಇದು ನನ್ನದೇ ಕೋಳಿ! ಅಚ್ಚ ನನ್ನ ಕೋಳಿಯ ಹಾಗೇ ಇದೆ. ನನ್ನ ಗುರುತೂ ಇದಕ್ಕೆ ಆಗಿದೆ". ಎಂದಳು, ರಂಗಪ್ಪ ಅದನ್ನು ಅಲ್ಲಲ್ಲಿ ಬಟ್ಟೆಯಿಂದ ಒರೆಸಿದನು. ಆಗ ಬಿಳೀ ಬಣ್ಣ

ಹೋಗಿ ಪಚ್ಚೆ ಬಣ್ಣ ಹೊರಬಿತ್ತು. "ನೋಡಿದಿರಾ, ಇದು ನನ್ನದೇ ಪಚ್ಚೆ ಕೋಳಿ" ಎಂದ ರಂಗಪ್ಪ ಗೆಲುವೆಯಿಂದ.

ಆದರ ಮುದುಕಿಯು ಅನುಮಾನ ತೀರಲೇ ಇಲ್ಲ. "ನೋಡಿರಿ! ನನ್ನ ಬೆರಳಿಗೆ ಹತ್ತಿಕೊಂಡ ಪಚ್ಚೆ ರಂಗು" ಎಂದು ತನ ಕೈಯನ್ನು ಪಟೇಲರಿಗೆ ತೋರಿಸಿದಳು. ಒಂದು ಬಿಂದಿಗೆ ನೀರು ತರಿಸಿ ಕೋಳಿಯನ್ನು ಶುಭ್ರ ವಾಗಿ ತೊಳೆಯಿಸಿದರು. ಮೊದಲು ಬಿಳೀ ಬಣ್ಣದ ನೀರು ಬಂದು. ಆಮೇಲೆ ಪಚ್ಚೇ ಬಣ್ಣದ ನೀರು ಬಂದಿತು. ಕಟ್ಟಕಡೆಗೆ ಆ ಹುಂಜ ಕೋಳಿ ತನ್ನ ಅಸಲಿನ ಬಿಳೀ ಬಣ್ಣದೊಂದಿಗೇ ಉಳಿಯಿತು.

"ಇದೇನು ರಂಗಪ್ಪ? ನಿನ್ನದು ಪಚ್ಚೇ ಕೋಳಿ ಅಂದೆಯಲ್ಲ? ತೊಳೆದರೆ ಈ ಕೋಳಿ ಬಿಳಿಯದು!" ಎಂದರು ಪಟೇಲರು.

"ಎಲ! ಪಚ್ಚೆ ಕೋಳಿ ಅಂದುಕೊಂಡೆನು. ತಪ್ಪಾಯಿತು. ಯಾರದೋ ಏನೋ? ಬರುತ್ತೇನೆ" ಎಂದು ರಂಗಪ್ಪ ಹೊರಡಲು ಸಿದ್ಧನಾದನು.

"ಸುಳ್ಳು ಪಟೇಲರೇ! ನಾನು ನೋಡುವಾಗಲೇ ಇದು ಪಚ್ಚೆ ಬಣ್ಣದ್ದಾಗಿಯೇ ಇತ್ತು" ಎಂದ ಗೋಪಾಲ.

ಇನ್ನು ಸುಳ್ಳು ಹೇಳಿ ಲಾಭವಿಲ್ಲವೆಂದುಕೊಂಡು ರಂಗಪ್ಪ ಪಟೇಲರ ಕಾಲಿಗೆ ಬಿದ್ದು. ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಆದರೆ ಪಟೇಲರು ಅವನನ್ನು ಕ್ಷಮಿಸಲಿಲ್ಲ. ಮತ್ತೊಂದು ಸಾರಿ ಕೋಳಿಯ ಮೇಲೆ ಬಣ್ಣ ಹಾಕಿದ್ದಕ್ಕೆ ಗೋಪಾಲ ನೊಂದಿಗೆ. ರಂಗಪ್ಪ ಕೂಡಾ ಇಪ್ಪತ್ತು ರೂಪಾಯಿ ಗಳನ್ನು ಮುದುಕಿಗೆ ಕೊಡಬೇಕು ಎಂದರು ಪಟೇಲರು ಕಠಿಣವಾಗಿ.

ಇಬ್ಬರೂ ಮುದುಕಿಯ ಕೈಹಿಡಿದು ಕ್ಷಮಿಸ ಬೇಕೆಂದು ಪ್ರಾರ್ಥಿಸಿದರು. ಮುದುಕಿ ಅವರನ್ನು ನೋಡಿ ಕನಿಕರಪಡುತ್ತ. "ಪಟೇಲಯ್ಯಾ! ಇವ ರಿಬ್ಬರೂ ನನಗೇನೂ ಕೊಡುವುದು ಬೇಡ. ಒಂದು ವೇಳೆ ಇವರು ನನ್ನ ಕೋಳಿಯನ್ನು ಕೊಯ್ದು ತಿಂದು ಬಿಟ್ಟಿದ್ದರೆ ನಾನೇನು ಮಾಡಬಲ್ಲೆ? ನನ್ನ ಕೋಳಿ ನನಗೆ ಸಿಕ್ಕಿತಲ್ಲ? ಅಷ್ಟೇ ಸಾಕು!" ಎಂದಳು.

"ನೋಡಿದಿರಾ? ಈ ಮುದುಕಮ್ಮನ ಒಳ್ಳೆಯ ಗುಣವನ್ನು ನೋಡಿಯಾದರೂ ಬುದ್ಧಿ ತಂದು ಕೊಳ್ಳಿ! ಇನ್ನೊಂದು ಸಾರಿ ಹೀಗೇನಾದರೂ ಆದರೆ ಸುಮ್ಮನೆ ಬಿಡಲಾರೆ! ಜಾಗ್ರತೆ!" ಎಂದು ಪಟೇ ಲರು ಅವರಿಬ್ಬರಿಗೂ ಬುದ್ಧಿ ಹೇಳಿ ಮುಂದೆ ಹೊರಟುಹೋದರು.

ಮುದುಕಿ ಸಂತೋಷದಿಂದ ತನ್ನ ಬಿಳೀಹುಂಜ ವನ್ನು ತೆಗೆದುಕೊಂಡು ಮನೆಗೆ ಹೋಗಿ ಅದಕ್ಕೆ ದೃಷ್ಟಿ ತೆಗೆದಳು.





# ಬೂಚಣ ಬೂಚಣನೇ!

ಹಿಂದೆ ಆಚೂರು ಎಂಬ ಊರಿನಲ್ಲಿ ಬೂಚಣ ಸಿದ್ಧಾಂತಿ ಎಂಬವನು ಜ್ಯೋತಿಷದಲ್ಲಿ ಅಖಂಡ ಪಂಡಿತನಾಗಿದ್ದ. ಅವನ ಖ್ಯಾತಿ ಸುತ್ತುಮುತ್ತಲೂ ಹರಡಿತ್ತು.

ಯಾಕೋ ಒಂದು ದಿನ ಆ ಸಿದ್ಧಾಂತಿಗೆ ತನ್ನ ಹೆಸರು ಚೆನ್ನಾಗಿಲ್ಲವೆಂದು ತೋರಿತು. ತಂದೆ ತಾಯಿಗಳು ಭೂಷಣನೆಂದು ಹೆಸರಿಟ್ಟು ಅದೇ ಬೂಚಣನೆಂದಾಗಿತ್ತು. ಅವರೇ ಕೊಂಡಾಟದಿಂದ ಹಾಗೆ ಕರೆದು ಹಾಳು ಮಾಡಿದರೆಂದು ತಂದೆ ತಾಯಿಗಳ ಮೇಲೆ ಸಿಡುಕಿಕೊಂಡನು. ಆ ಊರಿನ ಹೆಸರೂ ಒಂದು ಹೆಸರೇ ಅಲ್ಲ. ಒಂದು ಗುಡ್ಡದ ಆಚೆಗಿನ ಊರು 'ಆಚೂರು' ಆದುದಂತೆ !

ಊರಿನ ಹೆಸರು ಹೇಗಿದ್ದರೂ ತನ್ನ ಹೆಸರು ಒಳ್ಳೆದಾಗಿರಬಾರದೆ ? ಅವನು ರಾತ್ರಿ ಪೂರಾ ಆಲೋಚನೆ ಮಾಡಿ, ಶಂಕರನು ದೊಡ್ಡ ದೇವರಾದುದರಿಂದ, ಬೂಚಣ ಎಂಬ ಹೆಸರನ್ನು ಶಂಕರನೆಂದು ಬದಲಾಯಿಸಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡನು.

ಮಾರನೇ ದಿನ ಅವನನ್ನು ನೋಡ ಬಂದವರು, "ಬೂಚಣ ಸಿದ್ಧಾಂತಿಯವರೇ !" ಎಂದು ಸಂಬೋಧಿಸಲು, ಬೂಚಣನು ಅವರನ್ನು ಅಲ್ಲಿಗೇ ತಡೆದು, "ಇವತ್ತಿನಿಂದ ನನ್ನ ಹೆಸರು ಶಂಕರ. ನನ್ನನ್ನು ಶಂಕರ ಸಿದ್ಧಾಂತಿ ಎಂದೇ ಕರೆಯಿರಿ." ಎಂದನು.

ಆದರೆ ಆಚೂರಿನವರೆಲ್ಲಾ ಅವನನ್ನು "ಬೂಚಣನವರೇ", "ಬೂಚಣ ಸಿದ್ಧಾಂತಿಯವರೇ" ಎಂದು ಕರೆಯುತ್ತಿದ್ದರೇ ಹೊರತು, ಶಂಕರ ಸಿದ್ಧಾಂತಿ ಎಂದು ಕರೆಯಲೇ ಇಲ್ಲ.

ಇದೇನೆಂದು ಕೇಳಿದರೆ, "ಹುಟ್ಟಿ ಬೆಳೆದ ಕಾಲದಿಂದ ತಮ್ಮನ್ನು ಬೂಚಣರೆಂದೇ ಬಲ್ಲ ನಾವು ಇನ್ನೊಂದು ಹೆಸರಿನಿಂದ ಹೇಗೆ ಕರೆಯುವುದು ? ನಿಮ್ಮ ತಂದೆ ತಾಯಂದಿರೇ ಕರೆದ ಹೆಸರು ಅದು. ಅದನ್ನು ಬಿಡುವುದೆಂದರೇನು ಸ್ವಾಮಿ ?" ಎಂದರು,

ಬೂಚಣ ಸಿದ್ಧಾಂತಿಗೆ ಆ ಊರಿನ ಮೇಲೆ ದೊಡ್ಡ ಕೋಪ ಬಂತು. ಹೆಸರಿಲ್ಲದ ಊರು ಇರುವವರ ಹೆಸರನ್ನೇ ಕೆಡಿಸುತ್ತದೆ, ಎಂಬ ಕೋಪದಿಂದ ಆ ಊರನ್ನೇ ಬಿಟ್ಟು ಮತ್ತೊಂದು ಊರಿಗೆ ಹೋಗಿಬಿಟ್ಟನು.

ಅಲ್ಲಿ ಶಂಕರ ಸಿದ್ಧಾಂತಿ ಎಂಬ ಹೆಸರಿನಿಂದ ಇರತೊಡಗಿದನು. ಒಂದು ದಿನ ಅವನ ಹೆಂಡತಿ ಬೀದಿ

"ಪಾವನ"



ಯಲ್ಲಿ ಹೋಗುವ ಕಟ್ಟಿಗೇ ಮಾರುವವನನ್ನು ಕರೆದು, ಅವನೊಂದಿಗೆ ಚೌಕಾಸಿ ಮಾಡುತ್ತ, "ಈ ಕಟ್ಟಿಗೆ ಸರಿಯಾಗಿ ಉರಿದೀತೆ? ಸುಮ್ಮನೆ ಹೊಗೆ ಕಟ್ಟಿ ಕೊಳ್ಳುತ್ತೋ ಏನೋ? ಬೆಲೆ ಮಾತ್ರ ದುಬಾರಿ" ಎಂದಳು.

ಅದಕ್ಕೆ ಕಟ್ಟಿಗೆಯವನು "ಈ ಶಂಕರನ ಕಟ್ಟಿಗೆ ಉರಿಯೋದಿಲ್ಲಾಂದ್ರೇನಮ್ಮಾ? ಮೂರನೇ ಕಣ್ಣು ತೆರೆದ ಹಾಗೆ ಧಗಧಗಾ ಉರೀದೇ ಹೋದರೆ, ನನ್ನ ಹೆಸರು ಶಂಕರನೇ ಅಲ್ಲ. ನಾಳೆ ಬರುತ್ತೇನಲ್ಲ. ಆಗ ಹೇಳಿ!" ಎಂದನು.

ಈ ಮಾತು ಕೇಳಿದ ಸಿದ್ಧಾಂತಿಗೆ ಬೆಪ್ಪು ಬಡೆಯಿತು. "ಎಂಥ ತಪ್ಪು ಕೆಲಸ ಮಾಡಿಕೊಂಡೆ! ಶಂಕರ ಎಂಬ ಹೆಸರು ಒಬ್ಬ ಬಡ ಕಟ್ಟಿಗೆಯವನಿಗಿದೆ. ಅಂತಹ ಹೆಸರನ್ನು ತಾನು ಆರಿಸಿಕೊಂಡದ್ದು ಶುದ್ಧ ಅವಿವೇಕವಾಯಿತು!" ಎಂದು ತಲೆ ಚಚ್ಚಿ ಕೊಂಡನು. ಸಿದ್ಧಾಂತಿ ತುಂಬಾ ಆಲೋಚನೆ ಮಾಡಿ, ವಿಷ್ಣುಮೂರ್ತಿಯನ್ನು ನೆನೆದನು. ಅಂತೆಯೇ ತನ್ನ ಹೆಸರನ್ನು 'ಲಕ್ಷ್ಮೀಪತಿ' ಎಂದು ಬದಲಾಯಿಸಲು ನಿಶ್ಚಯಿಸಿದನು. ಮರುದಿನ ಅವನು ತನ್ನ ಹತ್ತಿರ ಬಂದವರಿಗೆ ಇನ್ನು ಮೇಲೆ ತನ್ನನ್ನು ಲಕ್ಷ್ಮೀಪತಿ ಎಂದು ಕರೆಯಲು ಹೇಳಿದನು. ತಾನು ಶಂಕರನಲ್ಲ, ಲಕ್ಷ್ಮೀಪತಿ!

ಆದರೆ ಆ ಊರಿನಲ್ಲಿ ಹೆಚ್ಚಿನವರೆಲ್ಲ ಶೈವರೇ. ಅವರು ಅವನನ್ನು ಶಂಕರ ಸಿದ್ಧಾಂತಿ ಎಂದೇ ಕರೆಯುವೆವೆಂದು ಒತ್ತಿ ಹೇಳಿಬಿಟ್ಟರು. ಸಿದ್ಧಾಂತಿಗೆ ಕೆಟ್ಟ ಕೋಪ ಬಂದು, ಆ ಊರಿನಿಂದ ಇನ್ನೊಂದು ಊರಿಗೆ ಹೋಗಿ ಬೀಡುಬಿಟ್ಟು, ಅಲ್ಲಿ ಲಕ್ಷ್ಮೀಪತಿ ಎಂದೇ ಕರೆಯಿಸಿಕೊಂಡನು.

ಒಂದು ದಿನ ಆ ಸಿದ್ಧಾಂತಿ ಚಾವಡಿಯಲ್ಲಿ ಕುಳಿತು ಏನೋ ಜ್ಯೋತಿಷಕ್ಕೆ ಸಂಬಂಧಿಸಿದ ಕಾಗದಗಳನ್ನು ಪರಿಶೀಲಿಸಿಕೊಂಡಿರುವಾಗ ಒಬ್ಬ ಭಿಕ್ಷುಕನು ಬಂದು ಅವನು ಸ್ವಂತ ಕಟ್ಟಿದ ಹಾಡನ್ನು ಪ್ರಾರಂಭಿಸಿದನು. "ಲಕ್ಷ್ಮೀಪತಿಯ ಮಾತು ಕೇಳಯ್ಯ ಗುರುವೇ, ಭಿಕ್ಷೆ ಕೊಟ್ಟವರಿಗೇ ಬಹು ಪುಣ್ಯ ತರುವೇ" ಎಂದು ತನ್ನ ಹೆಸರಿನಲ್ಲಿ ತತ್ವದ ಹಾಡನ್ನು ಹಾಡತೊಡಗಿದನು.

ಲಕ್ಷ್ಮೀಪತಿ ಸಿದ್ಧಾಂತಿ ಬೆಚ್ಚರಬಿದ್ದು ಅವನ ಹೆಸರೇನೆಂದು ಕೇಳಿದನು. ಅವನು ಹಾಡುತ್ತಲೇ ತನ್ನ ಹೆಸರು ಲಕ್ಷ್ಮೀಪತಿ ಎಂದನು. ಲಕ್ಷ್ಮೀಪತಿ ಅವನನ್ನು ಕಳುಹಿಸಿ ತುಂಬ ಆಂದೋಳನೆಗೆ ಬಿದ್ದನು. ಒಬ್ಬ ಭಿಕ್ಷುಕನ ಹೆಸರೂ ತನ್ನ ಹೆಸರೂ ಒಂದೇ ಆಗಿರುವುದು ಬಹುಘೋರವಾದ ಅವಮಾನ! ತಲೆ ತುಂಬ ಆಲೋಚನೆ ಮಾಡಿದ ಮೇಲೆ ತನ್ನ ಹೆಸರನ್ನು "ಚಿರಂಜೀವಿ" ಎಂದು ಮಾರ್ಪಡಿಸುವುದೇ ಒಳ್ಳೆಯದೆನಿಸಿತು.

ಆವನು ಮರುದಿನ ತನ್ನನ್ನು ನೋಡಲು ಬಂದವರೊಂದಿಗೆ ತನ್ನ ಹೆಸರು ಚಿರಂಜೀವಿ ಎಂದು ಬದಲಾಯಿತೆಂದೂ, ತನ್ನನ್ನು ಎಲ್ಲರೂ ಚಿರಂಜೀವಿ

ಸಿದ್ಧಾಂತಿ ಎಂದೇ ಕರೆಯಬೇಕೆಂದೂ ತಿಳಿಸಿ ಹೇಳಿದನು. ಆ ಊರಿನಲ್ಲಿ ಬಹಳ ಮಂದಿ ವೈಷ್ಣವರಾಗಿದ್ದರು. ಅವರು ಅವನನ್ನು ಲಕ್ಷ್ಮೀಪತಿ ಎಂದೇ ಕರೆಯುವುದಾಗಿ ಪಟ್ಟುಹಿಡಿದು ಹೇಳಿಬಿಟ್ಟರು.

ಸಿದ್ಧಾಂತಿ ಆ ಊರಿನವರ ಮೇಲೆ ಕೋಪಗೊಂಡು, ಬೇರೊಂದು ಊರಿಗೆ ಹೋಗಿ ತಳವೂರಿ, ಅಲ್ಲಿ ಚಿರಂಜೀವಿ ಸಿದ್ಧಾಂತಿಯಾಗಿ ಬಳಕೆಯಾಗತೊಡಗಿದನು.

ಒಂದು ದಿನ ಬೆಳಿಗ್ಗೆ ಬಾಗಿಲ ಹೊರಗೆ ಅಂಗಳ ಗುಡಿಸಿನೀರು ತಳಿದು ರಂಗೋಲೆ ಹಾಕುವ ಕೆಲಸದವಳು ವೇಳೆಗೆ ಸರಿಯಾಗಿ ಬರಲಿಲ್ಲ. ರಂಗೋಲಿಯಿಲ್ಲದ ಹೊಸ್ತಿಲನ್ನು ದಾಟಕೂಡದೆಂದು ಸಿದ್ಧಾಂತಿ, ಅವಳ ಮೇಲೆ ರೇಗಿಕೊಂಡಿರುವಾಗ, ಕೆಲಸದವಳು ಬಂದು, ತಡವಾದುದಕ್ಕೆ ಕಾರಣ ಹೇಳುತ್ತ, "ನಮ್ಮ ಎದುರುಮನೆಯಲ್ಲಿ ಮೂರೇವಯಸ್ಸಿನ ಚಿರಂಜೀವಿ ಎಂಬ ಹುಡುಗ ತೀರಿಹೋದನಯ್ಯ. ಬಹಳ ಕಾಲ ಮಕ್ಕಳಿಲ್ಲದೆ ಹುಟ್ಟಿದ ಒಬ್ಬನೇ ಮಗ. ಅವರ ದುಃಖ ನೋಡಿ ನನ್ನ ಕೈಕಾಲು ಕದಲಲಿಲ್ಲ ಅಯ್ಯಾ" ಎಂದಳು.

ಸಿದ್ಧಾಂತಿಗೆ ಮೈ ಮೇಲೆ ಚೇಳು ಹರಿದ ಹಾಗಾಯಿತು. "ಚಿರಂಜೀವಿ ಅಂತ ತುಂಬ ನಂಬುಗೆಯಿಂದ ಮುದ್ದಾದ ಹೆಸರನ್ನಿಟ್ಟರೆ ಮೂರು ವರ್ಷದಲ್ಲೇ ಮೃತ್ಯು ಬರುವುದೆಂದರೆ, ಛೀ! ಎಂಥಾ ದರಿದ್ರ ಹೆಸರುಗಳನ್ನು ಇಟ್ಟುಕೊಂಡೆನಲ್ಲ?" ಎಂದುಕೊಂಡು ಅವನು ಆ ಊರನ್ನು ಬಿಟ್ಟು ತನ್ನ ಸ್ವಂತ ಊರಿಗೇ ಹೊರಟನು.

ಅವನನ್ನು ಕಾಣದೆ ಆಚೊರಿನ ಜನರು "ಬೂಚಣ ಸಿದ್ಧಾಂತಿಗಳನ್ನು ಶಂಕರ ಸಿದ್ಧಾಂತಿ ಎಂದು ಕರೆಯಲಾರದ ಕೋಪಕ್ಕೆ ಊರನ್ನೇ ಬಿಟ್ಟುಹೋದರಲ್ಲ! ನಿಷ್ಕಾರಣವಾಗಿ ಒಬ್ಬ ದೊಡ್ಡ ಪಂಡಿತನನ್ನು ಕಳೆದುಕೊಂಡೆವು" ಎಂದು ಪಶ್ಚಾತ್ತಾಪಪಡುತ್ತಿದ್ದರು.

ಆಚೊರಿನಲ್ಲಿ ಅಕಸ್ಮಾತ್ತಾಗಿ ಅವನನ್ನು ನೋಡಿ ಜನರು ಸಂತೋಷಪಡುತ್ತ, "ಓಹೊ! ಶಂಕರ ಸಿದ್ಧಾಂತಿಯವರೇನು? ಚೆನ್ನಾಗಿದ್ದೀರಾ? ಯಾವಾಗ ಬಂದಿರಿ? ಎಷ್ಟು ದಿನಗಳಾಯಿತು ನೀವು ಹೋಗಿ..." ಎಂದು ಸಂತೋಷದಿಂದ ಆದರಿಸಿ ಮಾತಾಡಿಸಿದರು.

ಈಗ ಸಿದ್ಧಾಂತಿ ಏನೂ ಚಿಂತೆ ಮಾಡದೆ, ತನ್ನ ಹೆಸರು ಶಂಕರನೋ ಮತ್ತಾವುದೋ ಅಲ್ಲವೆಂದೂ, ತಂದೆ ತಾಯಿಂದಿರು ಮುದ್ದಾಗಿ ಕರೆದ ಬೂಚಣನೆಂಬ ಹೆಸರು ಹಿಡಿದೇ ತನ್ನನ್ನು ಕರೆಯಬೇಕೆಂದೂ ಕೇಳಿಕೊಂಡನು. ಹೀಗೆ ಕಡೆಗೆ ಅವನು ಎಂದಿನಂತೆ ಬೂಚಣನೇ ಆದನು. ಯಾವ ಅರ್ಥವಿಲ್ಲದಿದ್ದರೂ ಅದುವೇ ತುಂಬ ಸೊಗಸೆನಿಸಿತು.







# ಭೂತ ಬಿಟ್ಟಿತು

ಊರೊಳಗೆ ಒಳ್ಳೆಯವರೆಂದು ಹೇಳಿಸುವಂತೆ ನಡೆದುಕೊಳ್ಳುವ ವಾಣಿ ಮತ್ತು ವರ್ಮ ಎಂಬ ದಂಪತಿಗಳಿಗೆ ಮಕ್ಕಳಿರಲಿಲ್ಲ ಪಾಪ. ಮಕ್ಕಳಾಗ ಬೇಕಾದರೂ ಪೂರ್ವಪುಣ್ಯವಿರಬೇಕು ಎನ್ನುತ್ತಾರೆ. ಒಳ್ಳೆಯವರಾದ ಮಾತ್ರಕ್ಕೆ ಅವರ ಕೋರಿಕೆಗಳೆಲ್ಲಾ ಈಡೇರಿಬಿಡುವುದಿಲ್ಲವಷ್ಟೆ ?

ಒಂದು ದಿನ ರಾತ್ರಿ ಜಿರಿಗಟ್ಟಿ ಮಳೆ ಸುರಿಯು ತ್ತಿದ್ದಿತು. ವರ್ಮನೂ, ವಾಣಿಯೂ ಊಟಕ್ಕೆ ತಯಾರಾಗಬೇಕೆಂದಿರುವಾಗ, ಯಾರೋ ದಡದಡನೆ ಬಾಗಿಲು ತಟ್ಟಿದರು. ಬಾಗಿಲು ತೆರೆದು ನೋಡಲು, ಮಳೆಯಲ್ಲಿ ನೆನೆದು ಒದ್ದೆಮುದ್ದೆಯಾಗಿದ್ದ ಯುವಕ ದಂಪತಿಗಳು ನಡುಗುತ್ತ ನಿಂತಿದ್ದರು.

"ನಾವು ಪಟ್ಟಣಕ್ಕೇ ಅಂತ ಹೊರಟು ಈ ಭಾರೀ ಮಳೆಯಲ್ಲಿ ಸಿಕ್ಕಿಕೊಂಡೆವು. ಈ ಒಂದು ರಾತ್ರಿಗೆ ನಿಮ್ಮ ಮನೆಯಲ್ಲಿ ಉಳಿದುಕೊಳ್ಳಲು ಎಡೆ ಕೊಡು ವಿರಾ ?" ಎಂದು ಅವರು ಕೇಳಿದರು. "ಮೊದಲು ಒಳಗೆ ಬನ್ನಿ" ಎಂದು ವಾಣಿ ಅವರನ್ನು ಒಳಕ್ಕೆ ಆಹ್ವಾನಿಸಿ ಊಟ ಬಡಿಸಿದಳು. ಆಮೇಲೆ ಮಲ ಗಲಿಕ್ಕೂ ಬೇಕಾದ ಸೌಕರ್ಯ ಕಲ್ಪಿಸಿಕೊಟ್ಟರು.

ಅವರ ಊಟ ಮುಗಿದ ಮೇಲೆ ಅನ್ನವು ಸ್ವಲ್ಪ ವಷ್ಟೇ ಉಳಿದಿತ್ತು. ಅದನ್ನು ವಾಣಿ ತನ್ನ ಗಂಡ ನಿಗೇ ಬಡಿಸಿದಳು. ಮಳೆಯಿಂದ ಸೌದೆ ನೆನೆದುದ ರಿಂದ ಬೆಂಕಿ ಹಚ್ಚಿ ಅನ್ನ ಬೇಯಿಸುವಷ್ಟು ತಾಳ್ಮೆ ಇರಲಿಲ್ಲ.

ತನಗೆ ಬಡಿಸಿದುದರ ಅರ್ಥವನ್ನು ಹೆಂಡತಿಯ ಬಟ್ಟಲಿಗೆ ಹಾಕಿ, "ಇದ್ದುದನ್ನು ನಾವಿಬ್ಬರೂ ಹಂಚಿ ಕೊಂಡು ಬಿಡೋಣ" ಎಂದು ವರ್ಮನು ಹಟ ಹಿಡಿದನು. ಇಬ್ಬರೂ ಅದೂ ಇದೂ ಮಾತಾಡುತ್ತ ಇದ್ದುದನ್ನು ಹಂಚಿಕೊಂಡು ತಿಂದು ಮಲಗಿದರು.

ಬೆಳಗಾಗುವಾಗ ಯಾರೋ ಅಳುತ್ತಿರುವ ಶಬ್ದ ಕೇಳಿ ಇಬ್ಬರೂ ಮೆಟ್ಟಿಬಿದ್ದು ಎದ್ದರು. ಹೊರಗಿನ ಬಾಗಿಲು ತೆರೆದುಕೊಂಡಿತ್ತು. ಬಾಗಿಲಿನ ಹತ್ತಿರ ರಾತ್ರಿ ಬಂದವಳು ಕುಳಿತುಕೊಂಡು ಬಿಕ್ಕಿಬಿಕ್ಕಿ ಅಳು ತ್ತಿದ್ದಳು. ಅದನ್ನು ನೋಡಿ ವಾಣೀವರ್ಮರು ಬೆರ ಗಾಗಿ, ಅವಳ ಹತ್ತಿರ ಹೋಗಿ ಅಳಲು ಕಾರಣ ವೇನೆಂದು ಕೇಳಿದರು.

"ನನ್ನದೆಲ್ಲಾ ಮುಳುಗಿಹೋಯಿತು ! ಏನೆಂದು ಹೇಳಲೀ ? ರಾತ್ರಿ ಈ ಮನೆಗೆ ಬಾರದೇ ಹೋಗಿ

ಎಂ. ಕೆ. ಈಶ್ವರರಾವ್

ದ್ದರೇ ಒಳ್ಳೆಯದಿತ್ತು. ರಾತ್ರಿ ನನ್ನ ಗಂಡ ನಿಮ್ಮಿಬ್ಬರ ಅನ್ಯೋನ್ಯತೆಯನ್ನು ನೋಡಿ, 'ನೀನು ಎಂದಾದರೂ ಈ ಮನೆಯವಳ ಹಾಗೆ ನನ್ನ ಮೇಲೆ ಪ್ರೇಮ ಮಾಡಿದೆಯಾ? ಗಂಡನನ್ನು ಪ್ರೇಮಿಸದಿರುವ ಹೆಂಡತಿ ಏಕೆ ಬೇಕು?' ಎಂದು ಹೇಳಿ, ನಾನು ಎಷ್ಟು ಬಡಕೊಂಡರೂ ಕೇಳದೆ ಹೊರಟು ಹೋಗಿಬಿಟ್ಟರು. ಅವರು ತುಂಬಾ ಹಟದ ಮನುಷ್ಯ. ಇನ್ನು ಮೇಲೆ ತಿರುಗಿಬರುವವರೇ ಅಲ್ಲ!" ಎಂದಳು ಅಳುವಿನ ಎಡೆಯಲ್ಲಿ.

ಅವಳ ಹೆಸರು ಚಂದ್ರಮತಿಯಂತೆ. ಅವಳ ಮಾತು ಕೇಳಿ ವರ್ಮನು ಬೀದಿಬೀದಿ ತಿರುಗಿ ಅವಳ ಗಂಡನನ್ನು ಹುಡುಕಿ, ಹಿಂದಿರುಗಿ ಬಂದ. ಎಲ್ಲಿಯೂ ಅವನ ಜಾಡು ತಿಳಿಯಲಿಲ್ಲ.

"ನನಗೆ ಗೊತ್ತು. ಇನ್ನು ಅವರು ಬರುವವರಲ್ಲ. ಅಯ್ಯೋ! ನನಗೆ ಇನ್ನು ಯಾರೂ ಇಲ್ಲದಂತಾಯಿತು. ಆಳವಾದ ಬಾವಿಯನ್ನು ನೋಡಿ ಹಾರಿಬಿಡಬೇಕು" ಎಂದು ಹೇಳಿ ಚಂದ್ರಮತಿ ಮತ್ತೆ ಅಳತೊಡಗಿದಳು.

ಅವಳ ಪರಿತಾಪಸ್ಥಿತಿ ನೋಡಿ ವಾಣೀವರ್ಮರ ಮನಸ್ಸು ಕರಗಿ ನೀರಾಯಿತು. ಗಂಡುಸಿನ ಒಳ್ಳೆಯ ನಡತೆಯಲ್ಲಿ ತಾನೇ ಹೆಂಗುಸಿನ ಸುಖದುಃಖಗಳು ಅಡಗಿವೆ?

"ನೀನೇನೂ ಕಷ್ಟಪಡಬೇಡಮ್ಮ. ನಿನ ಗಂಡನ ಮನಸ್ಸು ಬದಲಾಗಿ ತಿರುಗಿಬರುವವರೆಗೂ ನೀನು ನಮ್ಮ ಮನೆಯಲ್ಲೆ ಇರಬಹುದು. ದೇವರು ಯಾರಿಗೂ ಯಾವಾಗಲೂ ಕಷ್ಟವನ್ನೇ ಕೊಡಲಾರ. ನಿನಗೂ ಒಳ್ಳೆಯ ದಿನಗಳು ಬಾರದಿರವು" ಎಂದರು ಇಬ್ಬರೂ.

ಅಂದಿನಿಂದ ಚಂದ್ರಮತಿ ಅವರ ಮನೆಯಲ್ಲೇ ಒಬ್ಬಳಾಗಿ ಇರತೊಡಗಿದಳು. ಅವಳ ರೀತಿನೀತಿ ನಡತೆಗಳೆಲ್ಲ ತುಂಬ ಮೆತ್ತಗಿನದಾಗಿ ಕಂಡು ಬಂತು. ಅವಳಾಗಿ



ಕೆಲಸಕ್ಕೂ ಸಹಕಾರ ಮಾಡುವಳು. ರಾತ್ರಿ ಅಡಿಗೆ ಮಾಡುವ ಕೆಲಸವನ್ನು ಅವಳೇ ವಹಿಸಿಕೊಂಡಳು.

ಒಂದು ತಿಂಗಳು ಕಳೆಯಿತು. ವರ್ಮನ ಚಿಕ್ಕಂದಿನ ಮುರಾರಿ ಎಂಬ ಗೆಳೆಯನೊಬ್ಬ ಆ ಊರಿನಲ್ಲಿ ಏನೋ ಕೆಲಸಕ್ಕೆ ಬಂದವನು ನಾಲ್ಕು ದಿನಗಳ ಮಾತಿಗೆ ವರ್ಮನ ಮನೆಯಲ್ಲೇ ಉಳಿದನು. ಅವನು ಎರಡು ಮೂರು ತಿಂಗಳಿಗೊಮ್ಮೆ ಆ ರೀತಿಯಾಗಿ ಬರುವುದುಂಟು. ಕಳೆದಸಾರಿ ಅವನು ಬಂದಾಗ ಚಂದ್ರಮತಿ ಅಲ್ಲಿರಲಿಲ್ಲ. ಅಂತೆಯೇ ಈಸಾರಿ ಅವಳ ವಿಷಯವನ್ನೆಲ್ಲ ವರ್ಮನಿಂದ ಅವನಿಗೆ ಗೊತ್ತಾಯಿತು. ಆದಿನ ರಾತ್ರಿ ಎಲ್ಲರಿಗೂ ಚಂದ್ರಮತಿಯೇ ಬಡಿಸಿದಳು. ಊಟ ವಿಶ್ರಾಂತಿ ಎಲ್ಲಾ ಆದ ಮೇಲೆ ಮುರಾರಿ ಚಾವಡಿಯಲ್ಲಿ ಮಂಚದ ಮೇಲೆ ಮಲಗಿದನು.

ರಾತ್ರಿ ಬಹಳ ಹೊತ್ತಿನವರೆಗೂ ಮುರಾರಿಗೆ ನಿದ್ದೆ ಬರಲಿಲ್ಲ. ಅವನು ಬಂದ ಕೆಲಸದ ವಿಷಯದ್ದೇ



ಏನೋ ಆಲೋಚನೆ. ಅರ್ಧರಾತ್ರಿಯ ಹೊತ್ತಿಗೆ ಸ್ವಲ್ಪ ಸ್ವಲ್ಪ ನಿದ್ದೆ ಹಿಡಿಯುತ್ತದೆನ್ನುವಾಗ ಎಲ್ಲಿಯೋ ಏನೋ ಸಪ್ಪಳವಾದುದರಿಂದ ಎಚ್ಚರವಾಯಿತು.

ಒಳಗೆ ದೀಪದ ಪ್ರಕಾಶ ಕಂಡಿತು. ಚಂದ್ರಮತಿ ಕೈಯಲ್ಲಿ ದೀಪ ಹಿಡಿದುಕೊಂಡು, ತುಂಬ ಜಾಗರೂಕತೆಯಿಂದ ಅಡಿಗೇ ಮನೆಯ ಬಾಗಿಲು ತೆಗೆಯುತ್ತಿದ್ದಳು, ಅಡಿಗೆ ಮನೆಯ ಆಚೆಯ ಕಿಟಕೀ ಬಾಗಿಲನ್ನು ಯಾರೋ ತಟ್ಟುವಂತೆ ಕೇಳಿಸುತ್ತಿತ್ತು.

ಚಂದ್ರಮತಿಯ ಪ್ರವರ್ತನೆಯೂ, ಕಿಟಿಕಿಯ ಸಪ್ಪಳವೂ ಅನುಮಾನವನ್ನುಂಟು ಮಾಡಿದುವು. ಅವಳು ಅಡಿಗೆ ಮನೆಯೊಳಗೆ ಹೊಕ್ಕ ಮೇಲೆ, ಮುರಾರಿ, ತಟ್ಟನೆ ಎದ್ದು, ಅಡಿಮೇಲಡಿಯಿಟ್ಟು ಹೋಗಿ ಬಾಗಿಲೆಡೆಯಲ್ಲಿ ಹಣಿಕಿ ನೋಡಿದನು.

ಚಂದ್ರಮತಿ ಒಂದು ಬಟ್ಟಲಲ್ಲಿ ಅನ್ನ, ಪಲ್ಯ, ಹುಳಿ, ಮೊಸರು ಬೇರೆಬೇರೆ ಕಲಸಿ ಕಿಟಿಕಿಯಿಂದ ಒಳಗೆ ಬಂದ ಕೈಗಳಿಗೆ ಕೊಟ್ಟುಬಿಟ್ಟಳು. ಆಗ ಕಿಟಕಿಯ ಹೊರಗಿದ್ದವನ ಮೆಲ್ದನಿ ಕೇಳಿಸಿತು. "ಇನ್ನೆಷ್ಟು ದಿನ ಈ ಅರ್ಧರಾತ್ರಿಯೂಟ? ಹೇಗಾದರೂ ಕಬ್ಬಿಣದ ಪೆಟ್ಟಿಗೆಯ ಹಣ ಎತ್ತಿಕೊಂಡು ಬೇಗ ಬಂದುಬಿಡಬಾರದೇ?" ಎಂದ ಹೊರಗಿದ್ದವನು. ಕತ್ತಲೆಯಾಗಿದ್ದುದರಿಂದ ಹೊರಗಿನವನು ಯಾರೆಂಬುದು ಮುರಾರಿಗೆ ತಿಳಿಯಲಿಲ್ಲ.

"ಇತ್ತೀಚೆಗಷ್ಟೇ ಇವರಿಗೆ ನನ್ನ ಮೇಲೆ ನಂಬುಗೆಯಾಗಿದೆ. ಬೇಗದಲ್ಲೇ ಬೀಗದ ಕೈವಶಪಡಿಸಿಕೊಳ್ಳುತ್ತೇನೆ. ಅವಸರ ಪಡಿಸಿದರೆ ಹೇಗೆ?" ಎಂದಳು ಚಂದ್ರಮತಿ. ಅವಳು ಕೊಟ್ಟುದನ್ನು ಅವನು ತಿಂದು ಮುಗಿಸುವವರೆಗೆ ಚಂದ್ರಮತಿ ಅಲ್ಲೇ ನಿಂತಳು.

"ಎಂಥ ಕಳ್ಳ ಹೆಂಗುಸಿವಳು? ಮೇಲೆ ಏನೂ ಅರಿಯದವಳಂತೆ, ಮನೆಯವರ ಒಳ್ಳೆಯ ತನವನ್ನು ಉಪಯೋಗಪಡಿಸಿಕೊಂಡು ಗಂಡನೊಂದಿಗೆ ಮನೆ ಗುಂಡಾಂತರದ ಕೆಲಸ ಮಾಡುತ್ತಿದ್ದಾಳಲ್ಲ! ಇರಮ್ಮಾ! ನಿನಗೆ ತಕ್ಕ ಬಗೆ ಮಾಡುತ್ತೇನೆ!" ಎಂದು ಮುರಾರಿ ತನ್ನೊಳಗೇ ಅಂದುಕೊಂಡನು.

ಮರುದಿನ ಬೆಳಗಾದ ಮೇಲೆ ಮುರಾರಿ ಚಂದ್ರಮತಿಯ ಕಿವಿಗೆ ಬೀಳುವಂತೆ ವರ್ಮನೊಂದಿಗೆ, "ಏನಪ್ಪಾ ವರ್ಮಾ! ನಿನ್ನೆ ರಾತ್ರಿ ನನಗೆ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಈ ಮನೆಯಲ್ಲಿ ಯಾವುದೋ ಭೂತ ಸೇರಿಕೊಂಡಿದೆ. ರಾತ್ರಿ ಪೂರಾ ಗೆಜ್ಜೆಗಳ ಶಬ್ದ. ಗಳಿಗ್ಗೊಮ್ಮೆ ಎಚ್ಚರಾಗ್ತಿತ್ತು. ಮೂಡು ದಿಕ್ಕಿನಲ್ಲಿದ್ದ ನನ್ನ ಮಂಚವನ್ನು ಪಡುವಣ ದಿಕ್ಕಿಗೆ ಎಳೆದು ಹಾಕಿತ್ತು. ಕಿಟಿಕಿಯಲ್ಲಿಟ್ಟಿದ್ದ ನೀರಿನ ಗಿಂಡಿ ಮಂಚದ ಕೆಳಗೆ ಬಂದಿತ್ತು. ಎಂಥ ಹಾಳು ಭೂತದ ಚೇಷ್ಟೆಯೋ! ಏನೋ ಸ್ವಲ್ಪ ಎದೆ ಗಟ್ಟಿ ಇದ್ದವನಾದುದರಿಂದ ಬದುಕಿದ್ದೇನೆ ಗೊತ್ತಾ! ಇನ್ನೊಬ್ಬರಾಗುತ್ತಿದ್ದರೆ ಆಗಲೇ ಹರಹರಾ ಆಗಿ ಬಿಡುತ್ತಿದ್ದರು!" ಎಂದನು. ವಾಣಿಯೂ ವರ್ಮನೂ ಅವನ ಮಾತು ಕೇಳಿ

ಗಾಬರಿಬಿದ್ದರು. "ಹಾಗಾದರೆ ಯಾವನಾದರೂ ಮಂತ್ರವಾದೀನ ಕರೆಸುತ್ತೇನೆ" ಎಂದ ವರ್ಮ.

"ಅದಕ್ಕೆ ನೀವೇನೂ ಗಾಬರಿ ಬೀಳಬೇಕಾಗಿಲ್ಲ. ಎಂತಹ ದೆವ್ವ ಭೂತಗಳನ್ನಾದರೂ ನಾನೇ ಓಡಿಸಿ ಬಿಡಬಲ್ಲೆ. ನಾನು ಬೀಜ ಮಂತ್ರೋಪದೇಶ ಪಡೆದಿದ್ದೇನೆ ಗೊತ್ತಾ? ಹೆದರಬೇಡಿ" ಎಂದು ಮುರಾರಿ ಅವರಿಗೆ ಧೈರ್ಯ ಹೇಳಿದನು.

ಅವನು ಪೇಟೆಗೆ ಹೋಗಿ ಗೆಜ್ಜೆ ಮಣಿಗಳನ್ನು ಕೊಂಡುಕೊಂಡು ಬಂದು, ರಾತ್ರಿಯಾದ ಮೇಲೆ ಆಗಾಗ ಸಪ್ಪಳ ಮಾಡತೊಡಗಿದನು. ಆಮೇಲೆ ತಲೆದಿಂಬನ್ನು ಮಂಚದ ಮೇಲೆ ಉದ್ದಕ್ಕೆ ಇಟ್ಟು, ಅದರ ಮೇಲೆ ದುಪಟಿಯನ್ನು ಮುಚ್ಚಿ ಮನೆಯ ಹಿಂಬದಿಗೆ ಹೋಗಿ ಅಡಿಗೇ ಮನೆ ಕಿಟಕಿಯ ಬಾಗಿಲನ್ನು ಮೆಲ್ಲಗೆ ತಟ್ಟಿ ಸಪ್ಪಳನೆಬ್ಬಿಸಿದ್ದನು.

ಬಹಳ ಹೊತ್ತಿನ ಮೇಲೆ ಚಂದ್ರಮತಿ ಧೈರ್ಯದಿಂದ ಎದ್ದು ಬಂದು, ಪಾತ್ರದಲ್ಲಿ ಅನ್ನ ಕಲಸಿ ಒಳಗೆ ನೀಡಿದ ಮುರಾರಿಯ ಕೈಗೆಕೊಟ್ಟಳು. ಮುರಾರಿ ಮಿಂಚಿನ ವೇಗದಲ್ಲಿ ಮನೆಯೊಳಗೆ ಬಂದು ಅವಳು ಕೊಟ್ಟ ಕಲಸನ್ನದ ಬಟ್ಟಲನ್ನು ಅವಳ ಮಂಚದ ಮೇಲೆಯೇ ಇಟ್ಟು, ಆ ಮಂಚವನ್ನು ಇನ್ನೊಂದು ಬದಿಗೆ ಎತ್ತಿಟ್ಟು ಏನೂ ಅರಿಯದವನಂತೆ ತನ್ನ ಮಂಚದ ಮೇಲೆ ಬಂದು ಮಲಗಿದನು.

ಚಂದ್ರಮತಿ ಸ್ವಲ್ಪ ಹೊತ್ತು ಕಿಟಕಿಯ ಹತ್ತಿರವೇ ನಿಂತಿದ್ದಳು. ಅವಳ ಗಂಡ ಅವಳು ಕೊಟ್ಟುದನ್ನು ತಿಂದ ಮೇಲೆ ಬಟ್ಟಲನ್ನು ಅವಳಿಗೇ ಹಿಂದೆ ಕೊಡಬೇಕಿತ್ತು. ಆದರೆ ಕಿಟಕಿಯ ಹೊರಗೆ ಗಂಡನ ಸುಳಿವೇ ಕಾಣದೆ ಹೋಗಲು ಅವಳು ಏನೂ ತೋರದೆ ಬೇಸತ್ತು ಹೆದರುತ್ತ ಅಡಿಗೇ ಮನೆ ಬಾಗಿಲನ್ನು ಮುಚ್ಚಿ, ತನ್ನ ಮಂಚದ ಬಳಿಗೆ ಬಂದಳು. ಆ ಮಂಚ ಇನ್ನೊಂದು ಬದಿಯಲ್ಲಿದ್ದುದನ್ನೂ, ಅದರ ಮೇಲಿರುವ ಕಲಸನ್ನದ ಬಟ್ಟಲನ್ನೂ ನೋಡಿ ಹೆದರಿ



ನಡುಗುತ್ತ ಕೆಟ್ಟದನಿಯಿಂದ ಕಿಟ್ಟನೆ ಕಿರಿಚಿದಳು. ಅವಳ ಕೂಗು ಕೇಳಿ ವರ್ಮನೂ, ವಾಣಿಯೂ ಬೆದರಿ ಎದ್ದು ಚಂದ್ರಮತಿಯ ಬಳಿಗೆ ಓಡೋಡಿ ಬಂದರು, ಆಗಲೇ ಎದ್ದವನಂತೆ ಮುರಾರಿ ಕೂಡಾ ಒಳಗೆ ಬಂದನು,

ಚಂದ್ರಮತಿ ನಡುಗುವ ಕಂಠದಿಂದ, "ಅಯ್ಯೋ! ಈ ಮನೇಲಿ ಭೂತವಿರುವ ಮಾತು ನಿಜ. ನನಗೂ ಗೆಜ್ಜೆಗಳ ಸಪ್ಪಳ ಕೇಳಿತು. ನನ್ನ ಮಂಚ ಆ ಕಡೆಯಿಂದ ಈ ಕಡೆಗೆ ಬಂದಿದೆ. ಹೆದರಿ ಬಿದ್ದು ಎದ್ದೆ. ಇದು ನೋಡಿದಿರಾ! ಅಡಿಗೇ ಮನೇಲಿದ್ದ ಬಟ್ಟಲು ಇಲ್ಲಿಗೆ ಬಂದಿದೆ. ಅದರಲ್ಲೇನೋ ಅನ್ನವಿದೆ! ನನಗೆ ಹೆದರಿಕೆಯಾಗಿದೆ!" ಎಂದಳು,

"ಹೆದರಬೇಡಿ ಯಾರೂ. ಬೇಗದಲ್ಲೇ ಈ ಭೂತವನ್ನು ಓಡಿಸುತ್ತೇನೆ." ಎಂದನು ಮುರಾರಿ, ಮರುದಿನವೇ ಅವನ ಮಂತ್ರವೂ ಪ್ರಾರಂಭವಾಯಿತು. ಎರಡು ದಿನಗಳವರೆಗೆ ರಾತ್ರಿಯಲ್ಲಿ ಆಗಾಗ ಗೆಜ್ಜೆಯ

ಸಪ್ಪಳ ಮಾಡುತ್ತಲೂ ಇದ್ದನು. ಅದನ್ನು ಕೇಳುತ್ತಿದ್ದುದರಿಂದ ರಾತ್ರಿಯಲ್ಲಿ ಗಂಡನು ಬಂದು ಅಡಿಗೇಮನೆ ಕಿಟಕಿಯನ್ನು ಸಪ್ಪಳ ಮಾಡಿದರೂ ಚಂದ್ರಮತಿ ಕದಲಲಿಲ್ಲ. ಮಲಗಿದಲ್ಲಿಂದ ಎದ್ದು ಹೋಗಲು ಅವಳಿಗೆ ಭಯ. ಅವಳ ಗಂಡನಿಗೆ ಬೇಸರವೂ ಉಪವಾಸವೂ ಗತಿ !

ಮೂರನೇ ದಿನ ರಾತ್ರಿ ಚಂದ್ರಮತಿಯ ಗಂಡ ಆ ಮನೆಯ ಹಿಂದಿನ ಭಾಗಕ್ಕೆ ಬರಲಿರುವಾಗ, ಮುರಾರಿ ಹೊರಗೇ ಹೊಂಚಿಕೊಂಡಿದ್ದು, ಅದೇ ದಾರಿಯಲ್ಲಿ ಹೊರಟುಹೋಗುವವನಂತೆ, ಅವನಿಗೆ ಇದಿರಾಗಿ ನಡೆದನು. ಅವನಿಗೆ ಕೇಳಿಸುವಂತೆ "ಹುಂ, ನನ್ನ ತಂಗಿಗೆ ಇಂಥಾ ದ್ರೋಹ ಮಾಡುವುದೇ ? ಸುಮ್ಮನೆ ಬಿಟ್ಟೇನೇ ?" ಎಂದನು ಗೊಣಗುವವನಂತೆ.

ಚಂದ್ರಮತಿಯ ಗಂಡ ತಟ್ಟನೆ ನಿಂತು, "ಏನಾಯಿತು ?" ಎಂದು ಕೇಳಿದನು. "ಇನ್ನೇನಾಗಬೇಕು ಅನ್ನುವಿರಿ ? ಈ ಮನೆಯವನು ನನಗೆ ಬಾವನಾಗಬೇಕು. ನನ್ನ ತಂಗಿಗೆ ಮಕ್ಕಳಿಲ್ಲ. ನನ್ನ ಬಾವ ಯಾವಳೋ ಗಂಡ ಬಿಟ್ಟವಳನ್ನು ಮದುವೆಯಾಗ್ತಾನಂತೆ. ಅದಕ್ಕೆ ಸರಿಯಾಗಿ ಯಾವಳೋ ಗಂಡನಿಗೆ ಬೇಡದ ಹೆಣ್ಣು ಇಲ್ಲಿ ಸೇರಿದೆ. ಅವಳನ್ನೇ ನನ್ನ ಬಾವ ಮದುವೆ ಮಾಡಿಕೊಳ್ತಾನಂತೆ. ಅವಳೂ ತಯಾರಾಗಿದ್ದಾಳೆ. ನನ್ನ ತಂಗೀ ಹಣೇಲಿ ಏನು ಬರೆದಿದೆಯೋ ?" ಎನ್ನುತ್ತ ಹೊರಟುಹೋದಂತೆ ಹೋಗಿ, ಸುತ್ತಿಕೊಂಡು ಮನೆಯ ಇದಿರಾಗಿ ಬಂದು, ಚಾವಡಿಯ ತನ್ನ ಮಂಚದಲ್ಲಿ ಮಲಗಿಕೊಂಡನು.

ಮುರಾರಿ ಹೇಳಿದ ಮಾತುಗಳನ್ನು ಚಂದ್ರಮತಿಯ ಗಂಡ ನಂಬಿದನು. ಮೂರು ದಿನಗಳಿಂದ ಅವಳು ಅವನಿಗೆ ಕಿಟಕಿ ತೆರೆದು ಅನ್ನ ಕೊಟ್ಟಿರಲಿಲ್ಲ. ಬೆಳಗಾದ ಮೇಲೆ ಅವನು ಅಲ್ಲಿಗೆ ಬಂದು ವರ್ಮನೊಂದಿಗೆ, "ಕ್ಷಮಿಸಿ. ನಾನು ಬುದ್ಧಿಕೆಟ್ಟು ನನ್ನ ಹೆಂಡತಿಯನ್ನು ಬಿಟ್ಟು ಹೋಗಿಬಿಟ್ಟೆ. ಈಗ ಅವಳನ್ನು ಕರೆದುಕೊಂಡು ಹೋಗುತ್ತೇನೆ. ಕಳಿಸಿಕೊಡಿ" ಎಂದನು.

ಭೂತದ ಭೀತಿಯಿಂದ ಹೆದರಿಹೋಗಿದ್ದ ಚಂದ್ರಮತಿ ತನ್ನ ಗಂಡನೊಂದಿಗೆ ಸಂತೋಷವಾಗಿ ಹೊರಟಳು. "ನಾವು ಹೇಳಲಿಲ್ಲವೇ, ಒಂದು ದಿನ ನಿನ್ನ ಗಂಡ ಬರುತ್ತಾನೆಂದು ?" ಎಂದಳು ವಾಣಿ. ಅವಳು ಹೊರಟು ಹೋದುದರಿಂದ ವಾಣೀವರ್ಮರು ಮನೆ ಸಪ್ಪಗಾಯಿತೆಂದು ಖೇದಗೊಂಡರು. ಆಗ ಮುರಾರಿ "ಭೂತ ಬಿಟ್ಟುಹೋಯಿತೆಂದು ಸಂತೋಷಪಡಿ ಯಿರಿ. ನಾನು ಓಡಿಸಿದ ಭೂತವೇ ಅವರಿಬ್ಬರೂ !" ಎಂದು, ನಡೆದ ಸಂಗತಿಯನ್ನೆಲ್ಲಾ ಅವರಿಗೆ ಹೇಳಿದನು. ಅವರು ಮೂಗಿನ ಮೇಲೆ ಬೆರಳಿಟ್ಟುಕೊಂಡರು.





# ದೇವೀಭಾಗವತ

ಚಂದ್ರನ ಮಾತನ್ನು ಕೇಳಿದ ದೇವದೂತನು ಇಂದ್ರನ ಬಳಿಗೆ ಹಿಂದಿರುಗಿ ಬಂದು, ಚಂದ್ರನು ಹೇಳಿದ ಮಾತುಗಳನ್ನು ಇಂದ್ರನ ಮುಂದೆ ಒಪ್ಪಿಸಿದನು.

ಅದನ್ನು ಕೇಳಿ ಇಂದ್ರನು ಕೋಪದಿಂದ ಕಿಡಿಕಿಡಿಯಾಗಿ, " ಎಂಥಾ ಮೂರ್ಖನೀ ಚಂದ್ರ! ಹಾಳು ಕೆಲಸ ಮಾಡಿದ್ದಲ್ಲದೆ ನನಗೇ ಇಷ್ಟೊಂದು ಸೊಕ್ಕಿನ ಮಾತುಗಳನ್ನು ಹೇಳುವನೇ ? ಎಂಥ ಸಾಹಸ ! ಅವನ ಮದ ಅಡಗಿಸಲೇಬೇಕು " ಎಂದು ಚಂದ್ರನ ಮೇಲೆ ಯುದ್ಧಕ್ಕೆ ಎದ್ದನು.

ಇದನ್ನು ತಿಳಿದು ಶುಕ್ರನು ತನ್ನ ಶಿಷ್ಯರಾದ ರಾಕ್ಷಸ ವೃಂದದೊಂದಿಗೆ ಚಂದ್ರನಿಗೆ ಸಹಾಯಕನಾದನು. ಶಿವನೂ ತನ್ನ ಗಣಗಳೊಂದಿಗೆ ಬೃಹಸ್ಪತಿಗೆ ಸಹಾಯಕನಾಗಿ ಬಂದನು. ಉಭಯ ಪಕ್ಷಗಳೊಳಗೆ ಭಾರಿಯುದ್ಧವು ಹಿಡಿಯಿತು.

ಅದನ್ನು ನೋಡಿ ಬ್ರಹ್ಮದೇವನು ಅಲ್ಲಿಗೆ ಬಂದು ಚಂದ್ರನನ್ನು ಬದಿಗೆ ಕರೆದು, " ನೀನು ಬೃಹಸ್ಪತಿಯ ಹೆಂಡತಿಯನ್ನು ಅವನಿಗೆ ಬಿಟ್ಟು ಕೊಟ್ಟುಬಿಡು. ಇಲ್ಲದಿದ್ದರೆ ವಿಷ್ಣುವಿನೊಂದಿಗೆ ಹೇಳಿ ನಿನ್ನ ಮದವನ್ನು ನೀರು ನೀರು ಮಾಡಿಸುತ್ತೇನೆ." ಎಂದನು. ಆಮೇಲೆ ಶುಕ್ರನೊಡನೆ ಬ್ರಹ್ಮನು, " ಏನಿದು ಶುಕ್ರಾ ? ನಿನಗೆ ಬೃಹಸ್ಪತಿಯ ಮೇಲಿರುವ ಹಗೆಯನ್ನು ಚಂದ್ರನಿಗೆ ಸಹಾಯ ಮಾಡುವುದರ ಮೂಲಕ ತೀರಿಸುವೆಯೇನು ? ಹೀಗಾದರೆ ಯಾವ ಹೆಂಗುಸಾದರೂ ಗಂಡನೊಡನೆ ನ್ಯಾಯವಾದ ಬಾಳುವೆ ನಡೆಸುವುದುಂಟೆ ? " ಎಂದನು.

ಬ್ರಹ್ಮನ ಮಾತು ಕೇಳಿ ಶುಕ್ರನೂ ಸಹ ತಾರೆಯನ್ನು ಬಿಟ್ಟು ಬಿಡುವಂತೆ ಚಂದ್ರನಿಗೆ ಹೇಳಿದನು. ಈಗ ಚಂದ್ರನು ಅವರ ಮಾತಿಗೆ ಕಟ್ಟು ಬಿದ್ದು. ಗರ್ಭಿಣಿಯಾಗಿದ್ದ ತಾರೆಯನ್ನು ಬೃಹಸ್ಪತಿಗೆ ಕೊಟ್ಟುಬಿಟ್ಟನು. ಹೀಗಾದ ಮೇಲೆ ಶಿವನೇ ಮೊದಲಾದವರೆಲ್ಲಾ ಅವರವರ ಸ್ಥಾನಕ್ಕೆ ಹೊರಟುಹೋದರು.

ಬೃಹಸ್ಪತಿಯ ಮನೆಯಲ್ಲಿ ತಾರೆ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಆ ಮಗುವಿಗೆ ಬೃಹಸ್ಪತಿ ಜಾತಕರ್ಮ ಮಾಡಲು ಎಲ್ಲಾ ಸಿದ್ಧತೆಗಳನ್ನೂ

೩. ಶುಕನ ಜನನ



ಮಾಡಿದನು. ಇದನ್ನು ತಿಳಿದು ಚಂದ್ರನು ಒಬ್ಬ ದೂತನನ್ನು ಬೃಹಸ್ಪತಿಯ ಬಳಿಗೆ ಕಳುಹಿಸಿದನು. ಚಂದ್ರದೂತನು ಬೃಹಸ್ಪತಿಯೊಂದಿಗೆ ಚಂದ್ರನು ಹೇಳಿದಂತೆ, "ಇವನು ನಿನ್ನ ಮಗನಲ್ಲ. ನನಗೆ ಹುಟ್ಟಿದವನು. ಅವನಿಗೆ ನೀನು ಹೇಗೆ ಜಾತಕರ್ಮ ಮಾಡುವಿ ?" ಎಂದು ಕೇಳಿದನು.

ಬೃಹಸ್ಪತಿ ಚಂದ್ರನ ದೂತನೊಂದಿಗೆ, "ಮಗುವಿನಲ್ಲಿ ನನ್ನ ಹೋಲಿಕೆಗಳಿವೆ. ಇವನು ನನ್ನ ಮಗನೇ. ಚಂದ್ರನ ರೂಪರೇಖೆಗಳೊಂದೂ ಇವನಲ್ಲಿಲ್ಲ" ಎಂದು ಹೇಳಿ ಕಳುಹಿಸಿಬಿಟ್ಟನು. ದೂತನು ತಿರುಗಿ ಬಂದು ಬೃಹಸ್ಪತಿ ಹೇಳಿದ ಮಾತುಗಳನ್ನು ಹೇಳಲು, ಚಂದ್ರನಿಗೆ ಕೋಪಬಂದಿತು.

ಕೂಡಲೇ ಚಂದ್ರನು ರಾಕ್ಷಸ ಗಣವನ್ನು ತನ್ನೊಂದಿಗೆ ಕರೆದುಕೊಂಡು ಮತ್ತೆ ಯುದ್ಧಕ್ಕೆ ಬಂದನು. ನಿಂತುಹೋದ ದೇವದಾನವ ಯುದ್ಧವು ಮತ್ತೆ ಪ್ರಾರಂಭವಾಯಿತು. ಅದನ್ನು ನೋಡಿ ಬ್ರಹ್ಮನು ಪುನಃ ಅಲ್ಲಿಗೆ ಬಂದು, ಯುದ್ಧವು ಬೇಡವೆಂದು ಎರಡು ಕಡೆಯವರನ್ನೂ ತಡೆಯುತ್ತ, ಇದಕ್ಕೆಲ್ಲಾ ಮೂಲ ಕಾರಣಳಾದ ತಾರೆಯೊಂದಿಗೆ, "ನೋಡಿದೆಯಾ ತಾರಾ, ನಿನ್ನಿಂದಾಗಿ ಎಂಥಾ ಪೇಚಾಟ ಬಂದಿತು ! ನೀನೇ ಹೇಳಿಬಿಡು. ಈ ಮಗುವಿನ ತಂದೆ ಚಂದ್ರನೋ ಬೃಹಸ್ಪತಿಯೋ ?" ಎಂದು ಕೇಳಿದನು.

ತಾರೆ ಬ್ರಹ್ಮನನ್ನು ನೋಡಲಾಗದೆ ತಲೆ ಬಗ್ಗಿಸಿಕೊಂಡು "ಚಂದ್ರನೇ ! ಚಂದ್ರನೇ ! ಚಂದ್ರನೇ !" ಎಂದಳು. ಕೂಡಲೇ ಬ್ರಹ್ಮನು ಆ ಮಗುವನ್ನು ಚಂದ್ರನಿಗೇ ಕೊಡಿಸಿ, ಜಗಳ ತೀರಿಸಿ ಹೊರಟುಹೋದನು. ಈ ರೀತಿಯಾಗಿ ಬೃಹಸ್ಪತಿಯ ಹೆಂಡತಿ ತಾರೆಯಲ್ಲಿ ಚಂದ್ರನಿಂದ ಹುಟ್ಟಿದ ಮಗನೇ ಬುಧ. ಈ ಬುಧನ ಮಗನಾಗಿ ಪುರೂರವನು ಹುಟ್ಟಿದನು. ಈ ಪುರೂರವನ ಜನ್ಮ ಹೇಗಾಯಿತೆಂದರೆ :

## ಪುರೂರವನ ಕಥೆ

ಒಂದು ಕಾಲದಲ್ಲಿ ಸುದ್ಯುಮ್ನನೆಂಬ ಬಹು ದೊಡ್ಡ ರಾಜನಿದ್ದನು. ಒಂದು ದಿನ ಅವನು ಕೆಲವು ಮಂದಿ ಮಂತ್ರಿಗಳನ್ನು ತನ್ನೊಂದಿಗೆ ಕರೆದುಕೊಂಡು ಕುದುರೆಯ ಮೇಲೆ ಬೇಟೆಯಾಡಲು ಹೊರಟನು. ಬೇಟೆಯಾಡುತ್ತ ಅತ್ಯಂತ ಸುಂದರವಾದ ಕುಮಾರ ವನವನ್ನು ನೋಡಿ ಎಲ್ಲರೂ ಅದರೊಳಗೆ ಪ್ರವೇಶಿಸಿದರು. ಆ ವನದೊಳಗೆ ಪ್ರವೇಶಿಸಿದ್ದೇ ತಡ, ಸುದ್ಯುಮ್ನನೂ ಅವನೊಂದಿಗಿದ್ದವರೆಲ್ಲರೂ ಹೆಣ್ಣಾಗಿ ಹೋದರು. ಸುದ್ಯುಮ್ನನ ಕುದುರೆ ಕೂಡಾ ಹೆಣ್ಣು ಕುದುರೆಯಾಗಿ ಬದಲಾಗಿಹೋಯಿತು.

ಹೀಗೇಕಾಯಿತೆಂದು ಗೊತ್ತಾಗದೆ ಸುದ್ಯುಮ್ನನು ಚಿಂತಿಸುತ್ತ, "ಈ ರೂಪದಿಂದ ಹೇಗೆ ರಾಜ್ಯಪಾಲನೆ ಮಾಡಲಿ ? ಹೆಂಡತಿಯರೊಂದಿಗೆ ಹೇಗಿರಲಿ ? ಶತ್ರುಗಳೊಂದಿಗೆ..., ಅಸಲು ಹೊರಗೆ ಮೋರೆ ತೋರಿಸುವುದು ಹೇಗೆ ?" ಎಂದು ಕುಂದಿಹೋದನು.

ಹೀಗೆ ಹೇಳುತ್ತಾ ಹೋಗುವ ಸೂತಪುರಾಣಿಕನನ್ನು ನೋಡಿ ಶೌನಕಾದಿಮುನಿಗಳು, "ಅಯ್ಯಾ, ರಾಜನೂ ಅವನ ಪರಿವಾರದವರೂ ಸ್ತ್ರೀಯರಾಗಿ ಬದಲಾವಣೆಯಾಗಲು ಕಾರಣವೇನೆಂದು ಹೇಳಬೇಕು" ಎಂದರು. ಸೂತನು ಹೀಗೆ ಹೇಳಿದನು:

ಒಂದುಸಾರಿ ಸನಕಸನಂದನಾದಿ ಮುನಿಗಳು ಶಿವನನ್ನು ನೋಡಲು ಕುಮಾರವನಕ್ಕೆ ಹೋದರು. ಅಲ್ಲಿ ಪಾರ್ವತೀದೇವಿ ಶಿವನೊಂದಿಗೆ ದಿಗಂಬರೆಯಾಗಿರುವುದನ್ನು ನೋಡಿ ತಟ್ಟನೆ ಹಿಂದಿರುಗಿ ನಾರಾಯಣವನಕ್ಕೆ ಹೊರಟುಹೋಗಿಬಿಟ್ಟರು. ತನ್ನನ್ನು ನೋಡಿ ಅವರು ಹೊರಟುಹೋದರೆಂದುಕೊಂಡು ಪಾರ್ವತಿ ನಾಚಿಕೆಯಿಂದ ಮುದುಡಿ ಸಂಕಟಪಡತೊಡಗಿದಳು. ಅವಳ ಅವಸ್ಥೆಯನ್ನು ನೋಡಿ ಶಿವನು ಇನ್ನೆಂದೂ ಹೀಗಾಗದಂತೆ, ಆ ವನದೊಳಗೆ ಹೆಜ್ಜೆಯಿಡುವ ಪ್ರತಿ ಗಂಡು ಪ್ರಾಣಿಯೂ ಹೆಣ್ಣಾಗಿಬಿಡಬೇಕೆಂದು ನಿಯಮವಿಟ್ಟನು. ಸುದ್ಯುಮ್ನನೂ ಅವನ ಪರಿವಾರದವರೂ ಸ್ತ್ರೀಯರಾಗಲು ಅದೇ ಕಾರಣ.

ಕಡೆಗೆ ಸುದ್ಯುಮ್ನನು ಇಳಾ ಎಂದು [illegible]ಕೊಂಡು ತನ್ನ ಸಖಿಯರೊಂದಿಗೆ ಆ ವನದಲ್ಲಿ ಉಳಿದುಕೊಂಡನು. ಹೀಗಿರುವಾಗ ಒಂದು ದಿನ ಚಂದ್ರನ ಮಗನಾದ ಬುಧನು ಈ ಇಳೆಯನ್ನು ನೋಡಿಬಿಟ್ಟನು. ನೋಡಿದ ಕ್ಷಣದಲ್ಲೇ ಇಳೆಯೂ ಬುಧನೂ ಒಬ್ಬರನ್ನೊಬ್ಬರು ಮೆಚ್ಚಿ. ಮೋಹಿಸಿ ಒಂದಾದರು.

ಆ ಸಂದರ್ಭದಲ್ಲಿ ಇಳೆಯ ಹೊಟ್ಟೆಯಲ್ಲಿ ಪುರೂರವನು ಹುಟ್ಟಿದನು. ಇಷ್ಟಾದ ಮೇಲೆ ಇಳಾ ತನ್ನ ಕುಲಗುರುವಾದ ವಸಿಷ್ಠರನ್ನು ಧ್ಯಾನಿಸಿ ಬರಮಾಡಿ. ತನಗೆ ಬಂದ ಕಷ್ಟವನ್ನು ಹೇಳಿಕೊಂಡಳು. ಹೆಣ್ಣಾಗಿರುವ ಸುದ್ಯುಮ್ನರಾಜನ ಮನೋವೇದನೆಯನ್ನರಿತ ವಸಿಷ್ಠರು, ಶಿವನನ್ನು ಕುರಿತು ತಪಸ್ಸು ಮಾಡಿದರು. ಶಿವನು ಪ್ರತ್ಯಕ್ಷನಾಗಲು, ವಸಿಷ್ಠರು "ನಮ್ಮ ರಾಜನಾದ ಸುದ್ಯುಮ್ನನು ಮೊದಲಿನಂತೆ ಗಂಡು ಸಾಗುವ ಹಾಗೆ ವರ ಕೊಡು" ಎಂದು ಬೇಡಿಕೊಂಡರು.





"ನನ್ನ ಮಾತು ಸುಳ್ಳಾಗಲು ಸಾಧ್ಯವಿಲ್ಲ. ಸುದ್ಯುಮ್ನನು ಒಂದು ತಿಂಗಳು ಗಂಡಾಗಿಯೂ, ಒಂದು ತಿಂಗಳು ಹೆಣ್ಣಾಗಿಯೂ ಇರುವಂತೆ ವರ ಕೊಡುತ್ತೇನೆ" ಎಂದು ಹೇಳಿ ಶಿವನು ಅಂತರ್ಧಾನನಾದನು.

ಹೀಗೆ ವಸಿಷ್ಠರ ದಯದಿಂದ ಮತ್ತೆ ಗಂಡುಸಾದ ಸುದ್ಯುಮ್ನನು ತನ್ನ ರಾಜಧಾನಿಗೆ ಹಿಂದಿರುಗಿ ಮೊದಲಿನಂತೆ ರಾಜ್ಯವನ್ನು ಆಳಲಿಕ್ಕೆ ತೊಡಗಿದನು. ಅವನು ಗಂಡುಸಾಗಿರುವ ಒಂದು ತಿಂಗಳು ರಾಜ್ಯಪಾಲನೆ ಮಾಡುತ್ತ, ಹೆಣ್ಣಾಗಿರುವ ಒಂದು ತಿಂಗಳು ಅಂತಃಪುರದಿಂದ ಹೊರಗೆ ಬಾರದೆ ಒಳಗೇ ಮುಚ್ಚಿಕೊಂಡಿದ್ದನು. ಇದು ಪ್ರಜೆಗಳಿಗೆ ಹರ್ಷವನ್ನುಂಟುಮಾಡಲಿಲ್ಲ. ತಮ್ಮ ರಾಜನು ಹೀಗೇಕೆ ಮಾಡುವನೆಂದು ಎಲ್ಲರೂ ಮಾತಾಡಿಕೊಳ್ಳುತ್ತಿದ್ದರು.

ಮಗನು ದೊಡ್ಡವನಾಗುವವರೆಗೂ ಆ ವಿಧವಾಗಿದ್ದು ರಾಜ್ಯಪಾಲನೆ ಮಾಡಿದ ಮೇಲೆ, ಎಲ್ಲವನ್ನೂ ಮಗನಿಗೇ ವಹಿಸಿಕೊಟ್ಟು ತಪಸ್ಸುಮಾಡಲು ಅರಣ್ಯಕ್ಕೆ ಹೊರಟುಹೋದನು. ಅಲ್ಲಿ ಅವನಿಗೆ ನಾರದರ ದರ್ಶನವಾಯಿತು. ಅವರಿಂದ ಆದಿಶಕ್ತಿ ದೇವಿಯ ನವಾಕ್ಷರೀ ಮಂತ್ರದ ಉಪದೇಶಪಡೆದು, ಆ ಮಂತ್ರವನ್ನು ಜಪಿಸುತ್ತ, ತಪಸ್ಸು ಮಾಡುತ್ತಿರಲು, ಅವನ ಸೌಭಾಗ್ಯದ ಕಾಲ ಸನ್ನಿಹಿತವಾಯಿತು. ಮಹಾದೇವಿ ಸಿಂಹವಾಹನದಲ್ಲಿ ಅವನ ಮುಂದೆ ಪ್ರತ್ಯಕ್ಷಳಾದಳು. ಸುದ್ಯುಮ್ನನು ಆ ದೇವಿಯನ್ನು ಸ್ತೋತ್ರಮಾಡಿ ಅವಳ ಅನುಗ್ರಹದಿಂದ ಮುಕ್ತಿಪಡೆದನು.

ಸುದ್ಯುಮ್ನನ ಅನಂತರ ಪುರೂರವನು ಒಳ್ಳೆಯ ರೀತಿಯಲ್ಲಿ ರಾಜ್ಯಪಾಲನೆ ಮಾಡುತ್ತ ಎಷ್ಟೋ ಯಜ್ಞಗಳನ್ನು ಮಾಡಿದನು. ದಾನಧರ್ಮಗಳಿಂದ ಎಲ್ಲರನ್ನೂ ತೃಪ್ತಿಪಡಿಸಿದನು. ಮನ್ಮಥನಂತಹ ಅವನ ಸುರೂಪವೂ, ಸುಗುಣಗಳೂ, ಕೀರ್ತಿಯೂ ಎಲ್ಲರನ್ನೂ ಮೆಚ್ಚಿಸಿದುವು. ದೇವತೆಗಳೂ ಅಸೂಯೆ ಪಡುವಂತಾದರು. ಇದನ್ನೆಲ್ಲ ನೋಡಿ ಊರ್ವಶಿಗೆ ಅವನ ಮೇಲೆ ಕಣ್ಣುಬಿತ್ತು. ಆಮೇಲೆ ಬ್ರಹ್ಮದೇವನು ಅವಳಿಗೆ ಕೊಟ್ಟ ಒಂದು ಶಾಪದಿಂದ ಅವಳು ಭೂಮಿಗೆ ಬರುವಂತಾಯಿತು. ಆಗ ಅವಳು ಪುರೂರವನನ್ನು ಸಂಧಿಸಿದಳು.

ಅವಳ ರೂಪಲಾವಣ್ಯಗಳು ಪುರೂರವನನ್ನೂ ಪರವಶಗೊಳಿಸಲು, ಅವನೊಂದಿಗೆ ಸಂಸಾರ ಮಾಡಲು ಅವಳು ಒಪ್ಪುತ್ತ, "ನನಗೆ ಎರಡು ಕುರಿಗಳಿವೆ. ಅವುಗಳ ಮೇಲೆ ನನಗೆ ಮಕ್ಕಳಿಗಿಂತ ಹೆಚ್ಚು ಪ್ರೀತಿ. ನೀನು ಅವುಗಳನ್ನು ಕೂಡಾ ರಕ್ಷಿಸಬೇಕು. ಮತ್ತೊಂದು ಏನೆಂದರೆ, ನೀನು ದಿಗಂಬರನಾಗಿ ನನ್ನ ಕಣ್ಣಿಗೆ ಬೀಳಕೂಡದು. ಮೂರನೆಯದಾಗಿ ನೀನು ನನಗೆ ಯಾವಾಗಲೂ ತುಪ್ಪವನ್ನು ಕೊಡಬೇಕು. ಈ ನಿಬಂಧನೆಗಳನ್ನು ನೀನು ಉಲ್ಲಂಘಿಸಿದಾಗ ನಾನು ನಿನ್ನನ್ನು ಬಿಟ್ಟು ಹೋಗುತ್ತೇನೆ" ಎಂದಳು. ಅದಕ್ಕೆಲ್ಲ ಪುರೂರವನು ಒಪ್ಪಿಕೊಂಡು ಅವ

ಳೊಂದಿಗೆ ಕೆಲವು ವರ್ಷ ಸೊಗಸಾಗಿ ಬಾಳಿದನು. ಅವನು ಪೂರ್ತಿಯಾಗಿ ಅವಳ ಮೋಹದಲ್ಲೇ ಬಿದ್ದು, ಧರ್ಮ, ಅರ್ಥ, ಮೋಕ್ಷಗಳ ಗೊಡವೆಯನ್ನೇ ಬಿಟ್ಟನು. ಊರ್ವಶಿ ಕೂಡಾ ಪುರೂರವನ ಪ್ರೇಮದಲ್ಲಿ ಮುಳುಗಿತೇಲುತ್ತ ಸ್ವರ್ಗವನ್ನೂ, ದೇವೇಂದ್ರನನ್ನೂ ಮರೆತುಬಿಟ್ಟಳು.

ಊರ್ವಶೀ ಪುರೂರವರು ಹೀಗೆ ಪರವಶರಾಗಿರುವುದನ್ನು ನೋಡಿ ದೇವೇಂದ್ರನಿಗೆ ತಾಳಲಾಗಲಿಲ್ಲ. ಊರ್ವಶಿಯನ್ನು ಮತ್ತೆ ಬರಮಾಡಿಕೊಳ್ಳಲಿಕ್ಕಾಗಿ ಗಂಧರ್ವರನ್ನು ನಿಯೋಜಿಸಿದನು. "ಸ್ವರ್ಗದಲ್ಲಿ ರಂಭೆ ಮೊದಲಾದ ಅಪ್ಸರಸಿಯರು ಎಷ್ಟುಮಂದಿ ಇದ್ದರೂ ಊರ್ವಶಿ ಇಲ್ಲದೆ ಸ್ವರ್ಗವೇ ಕಳಾಹೀನವಾಗಿದೆ. ಆದುದರಿಂದ ಏನೋ ಒಂದು ವಿಧವಾಗಿ ಪುರೂರವನನ್ನು ಮೋಸಪಡಿಸಿ ಕುರಿಗಳನ್ನು ಅಪಹರಿಸಿಬಿಟ್ಟರೆ ಒಂದರ ಮೇಲೊಂದಾಗಿ ಕೆಲಸ ಮುಗಿಯುತ್ತದೆ" ಎಂದು ಆ ಗಂಧರ್ವರಿಗೆ ಹೇಳಿದನು ಇಂದ್ರ.

ಗಂಧರ್ವರು ಪುರೂರವನ ರಕ್ಷಣೆಯಲ್ಲಿರುವ ಕುರಿಗಳನ್ನು ಅವನಿಗೆ ತಿಳಿಯದಂತೆ ಒಂದು ದಿನ ರಾತ್ರಿ ಅಪಹರಿಸಿಬಿಟ್ಟರು. ಆಗ ಕುರಿಗಳು ಆರ್ತಧ್ವನಿಯಿಂದ ಕೂಗತೊಡಗಿದುವು. ಅದನ್ನು ಕೇಳಿ ಊರ್ವಶಿ ಪುರೂರವನೊಂದಿಗೆ "ನಾನು ಮಕ್ಕಳಿಗಿಂತ ಹೆಚ್ಚು ಪ್ರೀತಿಯಿಂದ ನೋಡುವ ಕುರಿಗಳನ್ನು ಕಳ್ಳರು ಎತ್ತಿಕೊಂಡು ಹೋಗುತ್ತಿರುವರೆಂದರೆ ಇದೋ ನೀನು ರಕ್ಷಿಸುವ ಚಂದ ? ಹೆಂಗುಸಿನಂತೆ ನೋಡುತ್ತಾ ಸುಮ್ಮನಿರುವಿಯಾ ? ನೀನು ರಕ್ಷಿಸುವೆಯೆಂಬ ನಂಬುಗೆಯಲ್ಲಿ ನಾನು ನಿಶ್ಚಿಂತಳಾಗಿದ್ದು ಮೋಸಹೋದಂತಾಯಿತು !" ಎಂದು ಅವನನ್ನು ಬಗೆಬಗೆಯಾಗಿ ಜರೆದಳು.

ಪ್ರಿಯಾಳಿಗೆ ಕೊಟ್ಟ ಮಾತಿಗೆ ಧಕ್ಕೆ ಬಂದಿತೆಂಬ ಚಿಂತೆಯಿಂದ, ಹೊದಿಕೆ ಜಾಡಿಸಿಕೊಂಡು. ಮೈ ಮೇಲೆ ಯಾವ ಬಟ್ಟೆಯೂ ಇಲ್ಲವೆಂಬ ಪರಿವೆಯಿಲ್ಲದೆ ಕಳ್ಳರನ್ನು ಓಡಿಸಿಕೊಂಡು ಹೋದನು ಪುರೂರವ. ಆಗ ಅವನ ದಿಗಂಬರರೂಪ ಊರ್ವಶಿಗೆ ಕಾಣುವಂತೆ





ಗಂಧರ್ವರು ಮಿಂಚು ಹೊಳೆಯುವಂತೆ ಮಾಡಿದರು. ಕುರಿಗಳನ್ನು ಕಳ್ಳರಿಂದ ಹಿಂದಿರುಗಿಸಿಕೊಂಡು ಬರುವಾಗ ಪುರೂರವನು ನಗ್ನನಾಗಿರುವುದನ್ನು ನೋಡಿ ಊರ್ವಶಿ ಅವನ ಕಾಲಿಗೆ ಬಿದ್ದು, "ನನ್ನ ನಿಯಮಗಳನ್ನು ಮೊದಲೇ ಹೇಳಿದ್ದೆನಷ್ಟೆ? ಅದನ್ನು ಉಲ್ಲಂಘಿಸಿದ ನಿನ್ನೊಡನೆ ಇನ್ನು ನಾನಿರಲಾರೆ. ಈ ದಿನ ವೇಳೆಗೆ ತುಪ್ಪವೂ ದೊರೆಯಲಿಲ್ಲ. ನಾನೀಗ ಹೊರಟೆನು. ನನ್ನನ್ನು ನೆನಪಿನಲ್ಲಿಟ್ಟುಕೋ" ಎಂದು ಹೇಳಿ ಸ್ವರ್ಗಕ್ಕೆ ಹೋಗಿ ಬಿಟ್ಟಳು.

ಊರ್ವಶಿ ಹೊರಟುಹೋದ ಮೇಲೆ ಪುರೂರವನಿಗೆ ತಾಳಲಾಗದಷ್ಟು ಮನೋವೇದನೆಯಾಗತೊಡಗಿತು. ಅವನ ಬುದ್ಧಿ ಕೆಟ್ಟಿತು. ಮನಸ್ಸಿನ ತುಂಬಾ ಊರ್ವಶಿಯಾದಳು. ಅವನು ಊರ್ವಶಿಯನ್ನೂ ಅವಳ ಚೇಷ್ಟೆಗಳನ್ನೂ ನೆನೆಯುತ್ತಾ ಸಿಕ್ಕಿದಲ್ಲಿ ತಿರುಗಾಡ ತೊಡಗಿದನು. ಹಾಗಿರುವಾಗ ಕುರುದೇಶದಲ್ಲಿ ಆಕಸ್ಮಾತ್ತಾಗಿ ಊರ್ವಶಿ ಅವನ ಕಣ್ಣಿಗೆ ಬಿದ್ದಳು. ಅವನು ಆಶ್ಚರ್ಯ ಆನಂದಗಳಿಂದ ಅವಳ ಬಳಿಗೆ ಧಾವಿಸಿ ಹೋಗಿ ಗದ್ಗದ ಕಂಠದಿಂದ, "ಊರ್ವಶೀ, ನಿನ್ನ ಮೇಲೆ ಒಂದು ನಿಮಿಷ ಕೂಡಾ ಕೋಪಿಸಿಕೊಂಡವನಲ್ಲ. ನಿನಗೆ ಕೆಡುಕು ಎಣಿಸಿದವನೂ ಅಲ್ಲ. ನಿನ್ನ ಮಾತಿಗೆ ಎಂದೂ ಇದಿರಾಡಿದವನಲ್ಲ. ನೀನು ಎಂತಹ ಕೆಲಸ ಹೇಳಿದರೂ ನಾನು ಮಾಡುತ್ತಿದ್ದೆ. ಹಾಗಿರುವಾಗ ಏನೋ ಅಲ್ಪ ನಿಯಮಗಳ ಉಲ್ಲಂಘನೆ ಎಂದು ಹೇಳಿ ನನ್ನನ್ನು ಬಿಟ್ಟು ಹೋದೆಯಲ್ಲ? ಇದು ನ್ಯಾಯವೇ? ನನ್ನ ಮೇಲಿನ ಪ್ರೇಮದಿಂದಲೇ ಬಂದವಳು ನೀನು. ಅಂತಹ ನಿನಗೆ ನನ್ನನ್ನು ಬಿಟ್ಟುಹೋಗಲು ಹೇಗೆ ಮನಸ್ಸು ಬಂತು? ನಿನ್ನ ಪ್ರೇಮವು ಶಾಶ್ವತವೆಂದು ಕೊಂಡೆನಲ್ಲ? ಈಗ ನನ್ನನ್ನು ಹೀಗೆ ದುಃಖದಲ್ಲಿ ಮುಳುಗಿಸಿ ಹೋದೆಯಲ್ಲಾ?" ಎಂದನು ದೀನನಾಗಿ ಅಂಗಲಾಚುವವನಂತೆ.

ಊರ್ವಶಿ ಅವನ ಮನಸ್ಸನ್ನು ಸರಿ ಮಾಡಲಿಕ್ಕಾಗಿ ಹೀಗೆಂದಳು: "ಪುರೂರವಾ! ನಮ್ಮ ಜಾತಿಗೆ ಪ್ರೇಮವೆಂಬ ಮಾತೆಲ್ಲಿದೆ? ಅದೆಲ್ಲಾ ನಮ್ಮದೊಂದು ಮೋಜು. ನೀನು ಸುಮ್ಮನೆ ಭ್ರಮೆಯಲ್ಲಿ ಬಿದ್ದು ಇಹ ಪರಗಳನ್ನು ಕೆಡಿಸಿಕೊಳ್ಳಬೇಡ. ನನಗಾಗಿ ಆಲೋಚಿಸುವುದನ್ನು ಬಿಟ್ಟು, ನಿನ್ನ ರಾಜ್ಯಪಾಲನೆಯ ಕರ್ತವ್ಯವನ್ನು ನೋಡಿಕೋ" ಎಂದು ಬುದ್ಧಿ ಹೇಳಿ ಹೊರಟುಹೋದಳು.

ಈ ರೀತಿಯಾಗಿ ಪುರೂವನಿಗೆ ಬಂದ ಗತಿಯೇ ಕಡೆಗೆ ತನಗೂ ಬರುವುದೇನೋ ಎಂದು ವ್ಯಾಸನು ಘೃತಾಚಿಯನ್ನು ನೋಡಿ ಅಂದುಕೊಂಡನು. ಘೃತಾಚಿ ಕೂಡಾ ವ್ಯಾಸನು ತನ್ನನ್ನು ಎಲ್ಲಿ ಶಪಿಸುವನೋ ಎಂದು ಹೆದರಿ ಹೆಣ್ಣು ಗಿಳಿಯ ರೂಪತಾಳಿ ಹಾರಿ ಹೋದಳು. ಇದನ್ನೆಲ್ಲ ನೋಡುತ್ತಿದ್ದ ವ್ಯಾಸನು ತೀವ್ರ ವೇದನೆಯಿಂದ ಅರಣಿ ಮಥಿಸುತ್ತಿರಲು, ಅಗ್ನಿಯೊಂದಿಗೇ ಒಂದು ಶಿಶು ಹುಟ್ಟಿತು.

## ತಂದೆ ಮತ್ತು ಮಗ

ವ್ಯಾಸನು ಆ ಮಗುವನ್ನು ನೋಡಿ, "ಇದೇನು ಆದ್ಭುತ ! ಇದೇನೋ ಶಿವನ ಮಹಿಮೆಯೇ ಸರಿ !" ಎಂದುಕೊಂಡನು.

ಅವನು ಸಂತೋಷದಿಂದ ತನ್ನ ಮಗನನ್ನು ಗಂಗಾ ನದಿಗೆ ತೆಗೆದುಕೊಂಡು ಹೋಗಿ ಸ್ನಾನ ಮಾಡಿಸಿ ಜಾತಕರ್ಮ ನೆರವೇರಿಸಿ ಮಗನಿಗೆ ಶುಕನೆಂದು ಹೆಸರಿಟ್ಟನು. ಆಗ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಭೂಮಿಯ ಮೇಲೆ ಪುಷ್ಪವರ್ಷಣವಾಯಿತು. ನಾರದ ತುಂಬುರು ಮೊದಲಾದವರು ಸುಸ್ವರದಿಂದ ಹಾಡಿದರು. ರಂಭೆ ಮೊದಲಾದ ಅಪ್ಸರಸಿಯರು ನಾಟ್ಯವಾಡಿದರು.

ಗಿಳಿಯ ರೂಪ ಧರಿಸಿದ ಸ್ತ್ರೀಯ ಕಾರಣದಿಂದಾಗಿ ಹುಟ್ಟಿದ ಆ ಶಿಶುವು ಶುಕನಾಮದಿಂದ ದಿನದಿಂದ ದಿನಕ್ಕೆ ಬೆಳಗುತ್ತಾ ಬಂದನು. ಅವನ ಪ್ರತಿಭೆ ಅಪಾರ. ಅವನಿಗಾಗಿ ಆಕಾಶದಿಂದ ಜಿಂಕೆಯ ಚರ್ಮವೂ, ದಂಡ ಕಮಂಡಲುಗಳೂ ಬಿದ್ದುವು. ವ್ಯಾಸನು ತನ್ನ ಮಗನಿಗೆ ಉಪನಯನ ಮಾಡಿ, ಬೃಹಸ್ಪತಿಯ ಬಳಿಗೆ ವೇದಾಭ್ಯಾಸಕ್ಕೆ ಕಳುಹಿಸಿದನು. ವಿದ್ಯಾಭ್ಯಾಸವೆಲ್ಲಾ ಮುಗಿದ ಮೇಲೆ ಶುಕನು ಗುರುದಕ್ಷಿಣೆ ಕೊಟ್ಟು, ತಂದೆಯ ಬಳಿಗೆ ತಿರುಗಿಬಂದನು. ತುಂಬಿದ ವಿದ್ಯಾವಂತನಾಗಿ ಬಂದ ಮಗನನ್ನು ವ್ಯಾಸನು ಆಲಿಂಗಿಸಿಕೊಂಡು, ತುಂಬಾ ಸಂತೋಷಗೊಂಡನು. ಇನ್ನು ಈ ಮಗನಿಗೆ ಒಂದು ಮದುವೆ ಮಾಡಬೇಕೆಂದು ಅವನಿಗೆ ತೋರಿತು. ಅವನಿಗೆ ಯೋಗ್ಯಳಾದಂತಹ ಒಬ್ಬಳು ಮುನಿಕನ್ಯೆಯನ್ನು ಹುಡುಕಿ ಕರೆದುಕೊಂಡು ಬಂದು ಶುಕನೊಂದಿಗೆ, "ಅಪ್ಪಾ, ನೀನು ಈಗ ವೇದಶಾಸ್ತ್ರಗಳನ್ನೆಲ್ಲಾ ಓದಿ ಪಾರಂಗತನಾಗಿರುವಿ. ಇನ್ನು ಮದುವೆ ಮಾಡಿಕೊಂಡು ಯಜ್ಞಯಾಗಗಳನ್ನು ಮಾಡುತ್ತ ಮಕ್ಕಳನ್ನು ಪಡೆದು ಕೃತಾರ್ಥನಾಗಬೇಕು. ಪುತ್ರರಿಲ್ಲದಿದ್ದರೆ ಯಾವಗತಿಯೂ ಇರುವುದಿಲ್ಲ. ಕೀರ್ತಿಯೂ ಬಾರದು. ಆದುದರಿಂದ ನೀನು ಈ ಕನ್ಯೆಯನ್ನು ಮದುವೆಯಾಗಿ ಮಕ್ಕಳನ್ನು ಪಡೆದು ನನಗೆ ಸಂತೋಷವನ್ನುಂಟು ಮಾಡಿ ಪಿತೃದೇವತೆಗಳನ್ನು ತೃಪ್ತಿಗೊಳಿಸು. ನನ್ನ ಮಾತನ್ನು ಮೀರಬೇಡ. ನಾನು ಎಷ್ಟೋ ವರ್ಷ ತಪಸ್ಸು ಮಾಡಿ ನಿನ್ನನ್ನು ಪಡೆದಿದ್ದೇನೆ. ನಿನ ಮೂಲಕವಾಗಿ ಕೀರ್ತಿಯೂ ಸದ್ಗತಿಯೂ ಬರಬೇಕು." ಎಂದನು.

ಆ ಮಾತಿಗೆ ಶುಕನು ತಂದೆಯೊಂದಿಗೆ. "ಅಪ್ಪಾ, ನನಗೆ ಮದುವೆಯೇ ಬೇಡ. ನೀನು ನನಗೆ ತತ್ವೋಪದೇಶ ಮಾಡುವುದನ್ನು ಬಿಟ್ಟು, ನೋಡು ನೋಡುತ್ತಾ ಸಂಸಾರ ಸಾಗರದಲ್ಲಿ ನನ್ನನ್ನೇಕೆ ದೂಡುವೆ ? ಬೇಡ ಅಪ್ಪಾ ಬೇಡ !" ಎಂದನು.





# ಮಾಯಾಮುತ್ಸದ್ದಿ

ರಾಮಪ್ರತಾಪನೆಂಬವನು ಒಂದು ಸಂಸ್ಥಾನಕ್ಕೆ ರಾಜನಾಗಿದ್ದನು. ಅವನು ತುಂಬ ವಿಚಿತ್ರವ್ಯಕ್ತಿ.

ಅವನಿಗಿರುವ ಅನೇಕ ಮೂಢನಂಬುಗೆಗಳ ಜತೆಯಲ್ಲಿ ಮೂರ್ಖಹಟವೂ ಸೇರಿಕೊಂಡಿತ್ತು. ಅವನ ಮೆದುಳಿನಲ್ಲಿ ಏನಾದರೊಂದು ಆಲೋಚನೆ ಬಂದರೆ ತೀರಿತು. ಅದು ಇತರರಿಗೆ ತುಂಬಾ ಹಾನಿ ಮಾಡದೆ ವಿರಮಿಸುವುದಿಲ್ಲ. ಇದರಿಂದಾಗಿ ಅವನಿಗೆ ಆಲೋಚನೆ ಹೇಳುವ ಮಂತ್ರಿಗಳೂ, ಸಾಮಾನ್ಯ ಪ್ರಜೆಗಳೂ ಬಹಳ ಕಷ್ಟಗಳಿಗೆ ಗುರಿಯಾಗುತ್ತಿದ್ದರು.

ಒಂದುಸಾರಿ ಅವನು ವಂಗದೇಶವನ್ನು ಸಂದರ್ಶನ ಮಾಡಲು ಹೋದನು. ಅಲ್ಲಿ ಕತ್ತಾಳೆನಾರಿನ ಬೆಳೆ ವಿಶೇಷವಾಗಿರುವುದನ್ನು ನೋಡಿ ಹಿಂದಿರುಗಿದನು. ಕೂಡಲೇ ತನ್ನ ಸಂಸ್ಥಾನದ ರೈತರನ್ನೆಲ್ಲಾ ಕರೆದು ಹೊಲಗಳಲ್ಲೆಲ್ಲಾ ಕತ್ತಾಳೆನಾರನ್ನೇ ಬೆಳೆಸಬೇಕೆಂದು ಒತ್ತಾಯಿಸಿ ಅಪ್ಪಣೆ ಮಾಡಿದನು. ಉಪಾಯವಿಲ್ಲದೆ ರೈತರು ಕತ್ತಾಳೆಯನ್ನೇ ಬೆಳಸಲು ಶುರು ಮಾಡಿದರು. ಅದು ಮೊರಟುನಾರಾಗಿ ಕಡಿಮೆ ತರಗತಿಯದಾಯಿತು. ಅದರಲ್ಲಿಯೂ ಬಹುಭಾಗ ಹುಳಹಿಡಿದು ಹಾಳಾಯಿತು. ಅದರ ಬೆಳೆಗೆ ಬೇಕಾದ ವಂಗದೇಶದ ಮಣ್ಣಿನ ಪ್ರತ್ಯೇಕ ಗುಣ ತನ್ನ ಮಣ್ಣಿಗಿಲ್ಲವೆಂಬ ತತ್ವ ಅವನಿಗೆ ತಿಳಿಯದು. ಆಹಾರಧಾನ್ಯ ಬೆಳೆಸುವ ಹೊಲಗಳಲ್ಲಿ ಬೇರೆ ಕೆಲಸಕ್ಕೆ ಬಾರದ ಬೆಳೆ ಹಾಕಿದುದರಿಂದ, ಇಡಿಯ ಸಂಸ್ಥಾನದಲ್ಲಿ ಜನರ ಹೊಟ್ಟೆಗೇ ಕಷ್ಟವಾಯಿತು.

ಮತ್ತೊಂದುಸಾರಿ ರಾಮಪ್ರತಾಪ ಸಂಸ್ಥಾನಾಧಿಪತಿ, ಕಾಗೆಗಳನ್ನೂ ಹೊಲೆಕಾಗೆಗಳನ್ನೂ ಹಿಡಿದು ಕೊಲ್ಲಬೇಕೆಂದನು. ಕಾರಣವೇನಂದರೆ ಅವುಗಳು ಯಮದೂತರೆಂದು ಯಾವುದೋ ಪುಸ್ತಕದಲ್ಲಿ ಓದಿದನಂತೆ. ದೇಶದಲ್ಲಿ ಕಾಗೆಗಳಿದ್ದರೆ ದೇಶಕ್ಕೆ ಅರಿಷ್ಟವೆಂದು, ಆದುದರಿಂದ ಕಾಗೆಗಳೇ ಇಲ್ಲದಂತೆ ಮಾಡುವುದು ಒಳ್ಳೆಯದೆಂದು ಅವನಿಗೆ ತೋರಿತು. ಕಂಡಕಂಡಲ್ಲಿ ಕಾಗೆಗಳನ್ನು ಕೊಲ್ಲಬೇಕೆಂದು ಎಚ್ಚರಿಕೆ ಕೊಟ್ಟು, ಸತ್ತಕಾಗೆಗೆ ಇಷ್ಟು ಬಹುಮಾನ ಕೊಡುವುದಾಗಿಯೂ ಸಾರಿದನು. ಪ್ರಜೆಗಳು ಕಾಗೆಗಳನ್ನು ಕೊಂದು ತಂದು ಸಂಸ್ಥಾನದ ನಗರದ ಬೀದಿಯ ಬದಿಯಲ್ಲಿ ರಾಶಿರಾಶಿ ಹಾಕಿದರು. ಅವರಿಗೆ ಒಳ್ಳೆಯ ಲಾಭವೂ ದೊರೆಯಿತು. ಆ ಕಾಗೆಗಳ ಕಳೇಬರಗಳನ್ನು ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಅವು

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಗಳಿಂದ ದುರ್ಗಂಧವು ಹೊರಟಿತು. ಕಾಗೆಗಳು ಊರೊಳಗಿನ ಶುದ್ಧೀಕರಣ ಮಾಡುವಂಥವು. ಈಗ ಎಲ್ಲಿಯೂ ಕಾಗೆಗಳಿಲ್ಲದ ಕಾರಣ, ಎಲ್ಲೆಲ್ಲಿಯ ಕೊಳಕು ಅಲ್ಲಲ್ಲೇ ತಂಗಿ ರೋಗಾಣುಗಳು ಉತ್ಪತ್ತಿಯಾಗಿ ಜನರನ್ನು ಪೀಡಿಸತೊಡಗಿತು. ಇಷ್ಟಾದ ಮೇಲೆ ಸಂಸ್ಥಾನಾಧೀಶನಿಗೆ ತನ್ನ ತಪ್ಪಿನ ಅರಿವಾಗಿ ಹೊರಗಿನ ದೇಶಗಳಿಂದ ಕಾಗೆಗಳನ್ನು ತಂದವರಿಗೆ ಬಹುಮಾನ ಕೊಡುವೆನೆಂದು ಪ್ರಕಟಿಸಿದನು.

ಹೀಗೆ ಎಷ್ಟು ಸಾರಿ ಆಭಾಸಗಳು ನಡೆದರೂ ಅವನ ಬುದ್ಧಿಯ ವೈಖರಿ ಮಾರ್ಪಡಲೇ ಇಲ್ಲ. ಒಂದು ಸಾರಿ ರಾಮಪ್ರತಾಪನು ತನ್ನ ಮಂತ್ರಿಯೊಂದಿಗೆ, "ಮತ್ಸ್ಯಕನ್ಯೆ ಎಂದು ಆಗಾಗ ಕೇಳುತ್ತೇನಷ್ಟೆ? ಅದನ್ನು ಕುರಿತು ನಿಮ್ಮ ಅಭಿಪ್ರಾಯ ವೇನು?" ಎಂದು ಪ್ರಶ್ನಿಸಿದನು.

"ಪ್ರಭುಗಳೇ, ನಾನು ಅಂತಹ ಪ್ರಾಣಿಯನ್ನು ನೋಡದೇ ಇರುವುದರಿಂದ ಅಭಿಪ್ರಾಯ ಹೇಳುವ ಜ್ಞಾನ ಹೇಗೆ ಬಂದೀತು?" ಎಂದನು ಮಂತ್ರಿ.

"ಕಳೆದ ರಾತ್ರಿ ನನಗೊಂದು ಕನಸಾಯಿತು. ಆ ಕನಸಿನಲ್ಲಿ ಮತ್ಸ್ಯಕನ್ಯೆಯನ್ನು ಕಂಡೆ. ಮೇಲಿನ ಭಾಗವು ಮನುಷ್ಯಳದು. ಕೆಳಗಿನ ಭಾಗವು ಮೀನು. ವಿಚಿತ್ರವಲ್ಲವೆ?" ಎಂದನು ಸಂಸ್ಥಾನಾಧೀಶ. ಮಂತ್ರಿ ಹೌದು ಹೌದೆಂದು ತಲೆಯೊಲಿದನು.

ರಾಮಪ್ರತಾಪನ ಅರಮನೆಯ ಮುಂದೆ ಒಂದು ದೊಡ್ಡ ಕೊಳವಿದ್ದಿತು. ಆ ಕೊಳವು ಎಷ್ಟು ದೊಡ್ಡದೆಂದರೆ, ಅದರಲ್ಲಿಯ ನೀರೇ ನಗರದೊಳಗಿನ ಎಲ್ಲರಿಗೂ ಉಪಯೋಗಬೀಳುತ್ತಿತ್ತು. ಅದರಲ್ಲಿ ತುಂಬಾ ಮೀನುಗಳೂ ಇದ್ದುವು. ಬೆಳುದಿಂಗಳ ಕಾಲದಲ್ಲಿ ರಾಮಪ್ರತಾಪನು ಚಿಕ್ಕ ಅಲಂಕಾರ ನೌಕೆಯಲ್ಲಿ ಕುಳಿತು ಜಲವಿಹಾರ ಮಾಡುವನು.

ಮಂತ್ರಿಯೊಂದಿಗೆ ಮತ್ಸ್ಯಕನ್ಯೆಯ ಮಾತು ಹೇಳಿದ ದಿನ ರಾತ್ರಿ ಒಳ್ಳೆಯ ಬೆಳುದಿಂಗಳು ಚೆಲ್ಲುತ್ತಿತ್ತು. ರಾಮಪ್ರತಾಪನು ಅಲಂಕಾರ ನೌಕೆಯಲ್ಲಿ ಒಬ್ಬಂಟಿಗನಾಗಿ ಕುಳಿತು ವಿಹರಿಸುವಾಗ ಏನನ್ನು ನೋಡಿದನೋ, ಕೂಡಲೇ ದಡಕ್ಕೆ ಬಂದು, ಮಂತ್ರಿ



ಯನ್ನು ಕೂಡಲೇ ಬರುವಂತೆ ಹೇಳಿ ಕಳುಹಿಸಿದನು. ಮಂತ್ರಿ ಅವಸರವಸರವಾಗಿ ಬಂದನು. ಸಂಸ್ಥಾನಾಧೀಶನು ಅವನೊಂದಿಗೆ, "ನಮ್ಮ ಈ ಕೊಳದಲ್ಲಿ ಈಗತಾನೇ ಮತ್ಸ್ಯಕನ್ಯೆಯನ್ನು ನೋಡಿದೆ. ಆಹಾ! ಎಷ್ಟು ಚೆಂದ! ಏನು ಕಥೆ! ಅದು ನನ್ನ ನೌಕೆಯ ಮುಂದೆ ನೀರಿನಿಂದ ಮೇಲೆ ಹಾರಿ, ನೀರಿಗೇಬಿತ್ತು. ಅರ್ಧಭಾಗ ಮನುಷ್ಯಹೆಣ್ಣು, ಉಳಿದರ್ಧ ಭಾಗ ಮೀನು. ಅದೀಗ ನನಗೆ ಬೇಕೇಬೇಕು. ಅದು ಕಾಲುವೇ ಮೂಲಕ ತಪ್ಪಿಸಿಕೊಂಡು ಹೋಗದಂತೆ, ಕೊಳದ ಕಾಲುವೆಗಳನ್ನೆಲ್ಲ ಒಂದು ಮಾಡಿಸಿ, ಕೊಳದ ಸುತ್ತಲೂ ಕಾವಲಿರಿಸಿರಿ. ಅದನ್ನು ಬಲೆಹಾಕಿ ಹಿಡಿಯುವ ಏರ್ಪಾಡು ಮಾಡಿ" ಎಂದನು.

"ಇರಲಿಕ್ಕಿಲ್ಲ ಪ್ರಭು. ಅದೊಂದು ಭ್ರಮೆಯಾಗಿರಬೇಕು. ಯಾವುದೋ ದೊಡ್ಡ ಮೀನನ್ನು ನೋಡಿ ನೀವು ಮತ್ಸ್ಯಕನ್ಯೆ ಎಂದುಕೊಂಡಿರಬೇಕು. ಚಂದ್ರಕಾಂತಿಗೆ ಮೀನುಗಳು ಹಾರುವುದುಂಟು. ಆಗ ಹೊಳೆಯುತ್ತ ಭ್ರಮೆ ಯುಂಟುಮಾಡುತ್ತದೆ" ಎಂದನು ಮಂತ್ರಿ. "ನನ್ನ ಕಣ್ಣಿಗೆ ಚತ್ವಾರ ಬಂದಿದೆ ಎನ್ನುವಿರಾ? ನಾನು ಹೇಳಿದ ಹಾಗೆ ಮಾಡಿಸಿರಿ. ಎದುರು ಮಾತು ಬೇಡ" ಎಂದನು ಸಂಸ್ಥಾನಾಧಿಪತಿ.

ಆದರಂತೆ ಮೀನುಗಾರರಾದ ಜಾಲರಿಗಳು ಬಂದು ಬಲೆ ಹಾಕಿ ಕೊಳವನ್ನೆಲ್ಲಾ ಅಲ್ಲಕಲ್ಲೋಲಗೊಳಿಸಿ ಸಾವಿರಾರು ಮೀನುಗಳನ್ನೂ, ಹಾವು ಕಪ್ಪೆಗಳನ್ನೂ ಹಿಡಿದರು. ಅವುಗಳಲ್ಲಿ ಮತ್ಸ್ಯಕನ್ಯೆಯ ಜಾಡು ಕಾಣಲಿಲ್ಲ. ಆದರೂ ಬಿಡದೆ ಸಂಸ್ಥಾನಾಧಿಪತಿ ಕೊಳದ ನೀರನ್ನೆಲ್ಲಾ ಬತ್ತಿಸಿ ಒಣಗಿಸಲು ಆಜ್ಞೆ ಮಾಡಿದನು. ಮತ್ಸ್ಯಕನ್ಯೆ ನೆಲಕಚ್ಚಿ ಅಡಗಿದೆ ಎಂದು ಅವನ ನಂಬುಗೆ. ಹಾಗೆ ಮಾಡಿದರೆ ನಗರವೆಲ್ಲಾ ಜಲಮಯವಾಗಿ, ಕುಡಿಯಲು ನೀರು ಸಿಗದೆ ಜನರೆಲ್ಲಾ ಹಾಹಾಕಾರ ಮಾಡುವರೆಂದು ಮಂತ್ರಿ ಹೇಳಿ ನೋಡಿದನು. ಆದರೆ ಸಂಸ್ಥಾನಾಧೀಶನು ತನ್ನ ಮೊಂಡುಪಟ್ಟು ಬಿಡಲಿಲ್ಲ, ತನಗೆ ಆ ಮತ್ಸ್ಯಕನ್ಯೆಯೇ ಬೇಕು ಎಂದನು. ಹೆಚ್ಚು ಮಾತಾಡಿ ಉಪಯೋಗವಿಲ್ಲವೆಂದು ಮಂತ್ರಿಗೆ ಗೊತ್ತು. "ಆಗಲಿ ಪ್ರಭು. ಕೊಳವನ್ನೆಲ್ಲಾ





ಬತ್ತಿಸುವ ಏರ್ಪಾಡು ಪೂರೈಸಲು ಎರಡು ಮೂರು ದಿನಗಳು ಬೇಕು. ತೋಡುವ ನೀರಿನಿಂದ ತೊಂದರೆ ಯಾಗದಂತೆ ಆ ನೀರಿಗೆ ದಾರಿ ತೋರಿಸಬೇಕಷ್ಟೆ? ಆ ಕೆಲಸ ಪ್ರಾರಂಭಿಸುತ್ತೇನೆ. ಈಗಂತೂ ಕೊಳದಲ್ಲಿ ಒಂದೇ ಒಂದು ಮೀನಿನ ಪಿಳ್ಳೆಯೂ ಇಲ್ಲದಂತಾಗಿದೆ, ಆದರಿಂದ ಮತ್ಸ್ಯಕನ್ಯೆ ಇರುವ ಸಾಧ್ಯತೆ ಕಾಣುವುದಿಲ್ಲ. ಒಂದು ವೇಳೆ ನೆಲ ಕಚ್ಚಿದ ಮತ್ಸ್ಯಕನ್ಯೆ ಎರಡು ದಿನಗಳಲ್ಲಿ ಮೇಲೆ ಬರಬಹುದು. ನೀವೂ ಆಲೋಚನೆ ಮಾಡಿರಿ. ದಿಗ್ಭ್ರಮೆ ಎಂದು ಗೊತ್ತಾದೀತು." ಎಂದ ಮಂತ್ರಿ.

ಸಂಸ್ಥಾನಾಧಿಪತಿಗೆ ಮಂತ್ರಿಯ ಮೇಲೆ ಬೇಸರ ಬಂದರೂ ಸುಮ್ಮನಾದನು. ಮಂತ್ರಿ ಮನೆಗೆ ಹಿಂದಿರುಗಿ, ತನ್ನ ಅಣ್ಣನ ಮಗನಾದ ಹಲಧರನು ಬಂದಿರುವುದನ್ನು ನೋಡಿದನು. ಹಲಧರನು ಬೇರೆ ದೇಶಕ್ಕೆ ಹೋದವನು, ಆಗ ತಾನೇ ಬಂದಿದ್ದನು. ಮಂತ್ರಿಯ ಮುಖದಲ್ಲಿ ಕಾಣುವ ಚಿಂತೆಯನ್ನು ನೋಡಿ ಹಲಧರನು ಕಾರಣ ಕೇಳಲು, ಮಂತ್ರಿ ಎಲ್ಲ ಕಥೆಯನ್ನೂ ಅವನಿಗೆ ಹೇಳಿದನು. "ಭ್ರಮೆಯಲ್ಲವೆಂದರೇನರ್ಥ? ಎಂಥವರಿಗೂ ಭ್ರಮೆ ಬಂದೇ ಬರುತ್ತೆ, ಮನುಷ್ಯರಾದವರಿಗೆ ಭ್ರಮೆ ಬರುವುದು ನಿಜವೇ ಅಂತ ನಿರೂಪಿಸಲು ನಾನೊಂದು ಯಂತ್ರ ತಯಾರಿಸುತ್ತೇನೆ" ಎಂದನು ಹಲಧರ.

ಮಂತ್ರಿ ಕೋಣೆಯೊಳಗೆ ಹೋದ ಮೇಲೆ ಹಲಧರನು, ಮೂರು ಅಂಗುಲ ಉದ್ದವೂ, ಒಂದಂಗುಲ ಅಗಲವೂ ಇರುವ ಕಾಗದವನ್ನು ತೆಗೆದುಕೊಂಡು, ಮಧ್ಯದಲ್ಲಿ ಮಡಚಿ, ಮಡಿಕೆ ಇರುವ ಭಾಗವನ್ನು ಒಂದು ಗಾಜಿನ ಲೋಟೆಯ ಅಡಿಭಾಗದಲ್ಲಿ ಅಂಟಿಸಿದನು. ಒಂದು ಚಿಕ್ಕ ಪಿಂಗಾಣಿ ತಟ್ಟೆಯ ಮಧ್ಯದಲ್ಲಿ ಅರ್ಧ ರೂಪಾಯಿ ನಾಣ್ಯವನ್ನು ಅದರ ಬೊಂಬೆ ಮೇಲಕ್ಕಿರುವ ಹಾಗೆ ಇಟ್ಟು ಸ್ವಲ್ಪ ನೀರು ಸುರಿದನು. ಆಮೇಲೆ ಗಾಜಿನ ಲೋಟದ ಅಡಿಯಲ್ಲಿರುವ ಕಾಗದಕ್ಕೆ ಬೆಂಕಿ ಹಚ್ಚಿ, ಲೋಟದ ತುಂಬಾ ಹೊಗೆ ತುಂಬುವಂತೆ ಮಾಡಿ, ಅದನ್ನು ಪಿಂಗಾಣಿ ತಟ್ಟೆಯ ಮೇಲೆ ಕೌಚಿಟ್ಟನು. ಈಗ ಲೋಟೆಯ ಅಂಚಿನ ಮೂಲಕ ಅರ್ಧರೂಪಾಯಿ ನಾಣ್ಯವನ್ನು ನೋಡಿದರೆ ಅದು ದೊಡ್ಡದಾಗಿರುವಂತೆ ಕಾಣುತ್ತಿತ್ತು.

ಹಲಧರನು ಮಂತ್ರಿಯನ್ನು ಕರೆಯಿಸಿ, "ದೊಡ್ಡಪ್ಪಾ, ಈ ಪಿಂಗಾಣಿ ತಟ್ಟೆಯಲ್ಲಿ ಎಷ್ಟು ರೂಪಾಯಿಗಳಿವೆ?" ಎಂದು ಕೇಳಿದನು.

ಮಂತ್ರಿ ಜಾಗರೂಕತೆಯಿಂದ ನೋಡಿ, "ಒಂದೇ ರೂಪಾಯಿ ಇದೆ. ರೂಪಾಯಿಗಳು ಎಲ್ಲಿವೆ ಇಲ್ಲಿ?" ಎಂದು ಕೇಳಿದನು.

"ಒಂದೇ ರೂಪಾಯಿ ಎಂದೂ ಹೆಚ್ಚು ಇಲ್ಲವೆಂದೂ ಖಂಡಿತ ಹೇಳಬಲ್ಲಿರಾ?" ಎಂದು ಹಲಧರನು ಮತ್ತೂ ಕೇಳಲು "ಆಹಾ, ಒಂದೇ ರೂಪಾಯಿ!" ಎಂದನು ಮಂತ್ರಿ. "ನೀವು ಭ್ರಮೆ ಪಟ್ಟಿರಿ ದೊಡ್ಡಪ್ಪಾ. ಅದು ರೂಪಾಯಿ ಅಲ್ಲ

ಚೆನ್ನಾಗಿ ನೋಡಿ!" ಎಂದು ಹಲಧರನು ಗಾಜಿನ ಲೋಟೆಯನ್ನೆತ್ತಿ ಪಿಂಗಾಣಿತಟ್ಟೆಯ ನೀರಿನಿಂದ ಅರ್ಧರೂಪಾಯಿಯ ನಾಣ್ಯ ತೆಗೆದು ತೋರಿಸಿದನು. ಕಣ್ಣು ಭ್ರಮೆಪಟ್ಟಿತು ಎಂಬುದಕ್ಕೆ ಯಾವ ಸಂದೇಹವೂ ಇರಲಿಲ್ಲ.

ಹೀಗೆ ಭ್ರಮೆಪಡಿಸುವ ಮಾರ್ಗವನ್ನು ಹಲಧರನಿಂದ ತಿಳಿದುಕೊಂಡು ಮಂತ್ರಿ ಆ ಗಾಜಿನ ಲೋಟೆ ಪಿಂಗಾಣೀತಟ್ಟೆ ನಾಣ್ಯಗಳನ್ನು ಹಾಗೆಯೇ ಎತ್ತಿಕೊಂಡು ಹೋಗಿ ಸಂಸ್ಥಾನಾಧಿಪತಿಯ ಇದಿರಿನಲ್ಲಿ ಇಟ್ಟು, "ಪ್ರಭುಗಳೇ ಇದರಲ್ಲಿ ನಿಮಗೆ ಎಷ್ಟು ರೂಪಾಯಿಗಳು ಕಾಣುತ್ತವೆ?" ಎಂದು ಕೇಳಿದನು.

ಸಂಸ್ಥಾನಾಧಿಪತಿ ಪರೀಕ್ಷಿಸಿ ನೋಡಿ, "ರೂಪಾಯಿಗಳು ಎಲ್ಲಿವೆ? ಇದರಲ್ಲಿರುವುದು ಒಂದೇ ರೂಪಾಯಿ. ನನಗೆ ದೃಷ್ಟಿದೋಷವಿದೆಯೆಂದು ತಿಳಿದು ಪರೀಕ್ಷೆ ಮಾಡುವಿರೇನು?" ಎಂದನು.

"ಕ್ಷಮಿಸಬೇಕು ಪ್ರಭೂ, ನಮ್ಮ ಹಲಧರ ನನ್ನ ಹತ್ತಿರ ಹಾಗೆಯೇ ಕೇಳಿದ. ನಾನೂ ನಿಮ್ಮನ್ನು ಹಾಗೇ ಹೇಳಿದೆ. ನನ್ನ ಕಣ್ಣು ಭ್ರಮೆಪಟ್ಟಿವೆಂದು ನಮ್ಮ ಹುಡುಗ ಹೇಳಿದ. ನಿಮ್ಮ ದೃಷ್ಟಿ ನನಗಿಂತ ಸೂಕ್ಷ್ಮವಾದುದೆಂದು ಬಲ್ಲೆ. ನಿಮಗೆ ದಿಗ್ಭ್ರಮೆ ಮುಂತಾದ್ದು ಕಣ್ಣಿಗೆ ಇರಲಿಕ್ಕಿಲ್ಲವೆಂದೇ ನಿಮ್ಮನ್ನು ಹಾಗೇ ಕೇಳಿದೆ. ಲೋಟಾದ ಕೆಳಗೆ ನಿಜಕ್ಕೂ ಏನಿರುವುದೆಂದು ನೋಡೋಣವೇ ಈಗ?" ಎಂದನು ಮಂತ್ರಿ. ಸಂಸ್ಥಾನಾಧೀಶನು ತಟಕ್ಕನೆ ಲೋಟೆಯನ್ನೆತ್ತಿದನು. ಪಿಂಗಾಣೀತಟ್ಟೆಯಲ್ಲಿದ್ದುದು ಒಂದೇ ಒಂದು ಅರ್ಧರೂಪಾಯಿ ನಾಣ್ಯ. ಅವನು ಆಶ್ಚರ್ಯದಿಂದ, "ಏನಿದು? ನನಗೂ ಸಹ ಭ್ರಮೆ ತಗಲುತ್ತದೆಂದಾಯಿತಲ್ಲ! ಹಾಗಾದರೆ ಒಂದುವೇಳೆ ನಾನು ನೋಡಿದ ಮತ್ಸ್ಯಕನ್ನೆಯೂ ಭ್ರಮೆಯೋ ಏನು ಮಣ್ಣೋ!" ಎಂದು ಕಡೇಮಾತು ತನಗೆತಾನೇ ಹೇಳಿಕೊಂಡಂತೆ ಗೊಣಗಿದನು.

"ಯಾಕಾಗಬಾರದು ಪ್ರಭೂ? ಹಿಂದಿನ ರಾತ್ರಿಯಲ್ಲಿ ನೀವು ಕನಸಿನಲ್ಲಿ ಮತ್ಸ್ಯಕನ್ನೆಯನ್ನು ನೋಡಿದೆನೆಂದಿರಷ್ಟೆ? ಆದರದೇ ಕಲ್ಪನೆ ಮನಸ್ಸಿನಲ್ಲಿರುವಾಗ ಮೀನು ಹಾರುವಾಗ ರೂಪದ ಭ್ರಮೆಯುಂಟಾಗಿದೆ ಅಂತ ಈಗ ಗೊತ್ತಾಗುತ್ತದೆ. ಆಶ್ಚರ್ಯವಾದರೂ ನಿಜತಾನೆ? ಇನ್ನು ಕೊಳದ ನೀರನ್ನು ಖಾಲೀ ಮಾಡುವ ಅಗತ್ಯವಿಲ್ಲವೆಂದು ಕಾಣುತ್ತದೆ. ಅಲ್ಲವೇ ಪ್ರಭುಗಳೇ?" ಎಂದನು ಮಂತ್ರಿ.

ಸಂಸ್ಥಾನಾಧಿಪತಿ ತಲೆಯನ್ನು ಅಡ್ಡಕ್ಕೆ ಆಡಿಸುತ್ತ, "ಬೇಡ, ಬೇಡ. ಕೊಳ ಮೊದಲಿನಂತೇ ಆಗಲಿ. ಮೀನುಗೀನು ತಂದು ಹಾಕಿಸಿರಿ" ಎಂದನು. ಮಂತ್ರಿಗೆ ನೆಮ್ಮದಿಯೆನಿಸಿತು. ಮನಸ್ಸಿನಲ್ಲೇ ಹಲಧರನನ್ನು ಕೊಂಡಾಡಿದನು.



# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೭ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



K. Satyanarayana Prasad





B. M. Chopra

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಜನವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ನವಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಮೂಡಿ ಬಂದ ಕಳೆಗೆ ಯಾವುದಾದರೇನು?**

ಎರಡನೇ ಫೋಟೋ: **ಮಾಡಿ ಬಂದ ಕಳೆಗೆ ದುಡ್ಡು ಬಾರದೇನು?**

ಕಳುಹಿಸಿದವರು: **ಜಯಪ್ರಕಾಶ್,**

ಸಿಂಡಿಕೇಟ್ ಬ್ಯಾಂಕ್, ಗಂಗಾವತಿ, ರಾಯಚೂರು

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.**



# ಕರಡಿಕೆಂಗಣ್ಣ

೬

[ಚಂದ್ರಶಿಲಾನಗರದ ಮೇಲೆ ದಾಳಿಹೊರಟ ದುರ್ಮುಖರಾಜನ ಮೇಲೆ, ಕರಡಿಕೆಂಗಣ್ಣನು ಕಟುಕನಾಯಕನನ್ನು ಕರಡಿಮಾಡಿ ಕೆರಳಿಸಿಬಿಟ್ಟನು:. ಅದನ್ನು ನೋಡಿ, ದುರ್ಮುಖನು ತನ್ನ ಅಂಗರಕ್ಷಕನೊಂದಿಗೆ ಕುದುರೆಯ ಮೇಲೆ ಕಾಡಿನೊಳಗೆ ಕಿತ್ತಾಬಟ್ಟೆ ಓಡಿದನು. ಆಗ ಆಕಸ್ಮಾತ್ತಾಗಿ ನಾಗಮಲ್ಲನೆಂಬ ಕಳ್ಳರನಾಯಕ ಅವನನ್ನು ಉರುಳಿನಲ್ಲಿ ಸಿಕ್ಕಿಸಿ ಮರದ ಮೇಲೆ ಎಳೆಯತೊಡಗಿದನು. ಅವನ ಕುದುರೆ ಮುಂದೆ ಓಡಿತು.]

**ಮೊ**ದಲೇ ಹೆದರಿದ ದುರ್ಮುಖರಾಜನೂ, ಅಂಗರಕ್ಷಕನೂ ಇನ್ನಷ್ಟು ಗಾಬರಿಯಿಂದ ಆಯೋಮಯದಲ್ಲಿ ಬೀಳುವ ಘಟನೆ ಒಂದರ ಹಿಂದೊಂದಾಗಿ ನಡೆಯುತ್ತಿದ್ದಿತು.

ತನ್ನ ಕುದುರೆಯ ಮುಂದೆ ಭೀಕರವಾಗಿ ಅರಚುತ್ತಾ ಹಾರಿದ ಕಳ್ಳರನ್ನು ನೋಡಿದ ಕೂಡಲೇ ದುರ್ಮುಖರಾಜನ ಅಂಗರಕ್ಷಕನು ಕುದುರೆಯ ಕಡಿವಾಣವನ್ನು . ಗಟ್ಟಿಯಾಗಿ ಎಳೆಯುತ್ತ, "ಅಯ್ಯಯ್ಯಾ ! ನೀವಾರೋ ನಾನರಿಯೆ ! ನನ್ನ ಸೊಂಟದಲ್ಲಿ ಕತ್ತಿ ನೇತಾಡುತ್ತಿದ್ದರೂ ಕೈಯಲ್ಲೇನೂ ಇಲ್ಲ. ನಿರಾಯುಧನಾಗಿದ್ದೇನೆ. ನಾನು ನಿಮಗೇನೂ ಮಾಡಲಾರೆ. ನಂಬಿ. ನಂಬಿ !" ಎಂದು ನಡುಗುವ ಸ್ವರದಿಂದ ಕಿರಿಚಿದನು. ತನ್ನ ಒಡೆಯ ಮರದ ಮೇಲಕ್ಕೆ ಎಳೆಯಲ್ಪಡುವುದೂ ಅವನ ಕಣ್ಣೆದಿರೆ ! ಹೇಗಿರಬೇಡ ಅವನ ಅವಸ್ಥೆ !

ಕಳ್ಳರನಾಯಕ ನಾಗಮಲ್ಲನು ಕಣ್ಣು ತಿರುಗಿಸುತ್ತ, ಎಡಗೈಯಿಂದ ಕುದುರೆಯ ಕಡಿವಾಣವನ್ನು ಎಳೆದು ಹಿಡಿದುಕೊಂಡು. ಬಲಗೈಯಲ್ಲಿದ್ದ ಬಿಚ್ಚುಗತ್ತಿಯನ್ನು ಅಂಗರಕ್ಷಕನ ಕಂಠದ ಕಡೆಗೆ ಚಾಚಿ. "ಎಲೆಲೋ ! ಏನು ಬೊಗಳುವೆ ? ನಮ್ಮನ್ನು



ಯಾರೆಂದು ತಿಳಿದೆ? ನಿನ್ನ ಸೊಂಟದ ಕತ್ತಿಯನ್ನು ಕೈಗೆತ್ತಿಕೊಂಡರೂ ಹೆದರುವವರು ನಾವಲ್ಲ ಗೊತ್ತಾ? ಅಕೋ ನೋಡು. ನಿನ್ನ ಮುಂದೆ ಕುದುರೇ ಮೇಲೆ ಓಡಿ, ಮರಕ್ಕೆ ಎಳೆಯಲ್ಪಟ್ಟನಲ್ಲಾ ಒಬ್ಬ. ಈಗ ಮರದ ಕೊಂಬೆಯಲ್ಲಿ ನೇತಾಡುತ್ತಿದ್ದಾನೆ. ನೀನೂ ಹಾಗೆಯೇ ನೇತಾಡಬೇಕು ಈಗ. . ತಯಾರಾಗು!" ಎಂದು ನಕ್ಕನು.

"ಅದೇಕೆ? ಅದರಿಂದೇನು ಪ್ರಯೋಜನ? ಬೇಡಿ, ಬಿಡಿಬಿಡಿ!" ಎಂದು ಕಿರಿಚಿದನು ಅಂಗರಕ್ಷಕ. "ಎಲ್ಲಾ ತಿಳಿಯುತ್ತೆ. ನೀವಿಬ್ಬರೇನಾ, ಅಲ್ಲ ನಿಮ್ಮ ಹಿಂದೆ ಇನ್ನೂ ಯಾರಾದರೂ ನಿಮ್ಮವರು ಬರುತ್ತಾರೋ ಹೇಳಿಬಿಡು. ನಾವೂ ಅದಕ್ಕೆಲ್ಲ ತಯಾರಾಗಬೇಕಲ್ಲ?" ಎಂದು ಕೇಳಿದ ನಾಗಮಲ್ಲ.

ಅಂಗರಕ್ಷಕನಿಗೆ ಸಮಸ್ಯೆಗಿಟ್ಟುಕೊಂಡಿತು. ತಮ್ಮ ಕಡೆಯ ಇನ್ನೂ ಕೆಲವರು ಬರುತ್ತಿದ್ದಾರೆಂದರೆ ಅಪಾಯದಿಂದ ತಪ್ಪಬಹುದೋ, ಅಥವಾ ಯಾರೂ ಇಲ್ಲವೆಂದು ಹೇಳಿದರೆ ಅಪಾಯವಿಲ್ಲವೋ ಎಂದು ಅವನು ಆಲೋಚಿಸುತ್ತಿರಲು, ಕೊಂಬೆಯಲ್ಲಿ ನೇತಾಡುತ್ತ ಚಟಪಟಿಸುತ್ತಿದ್ದ ದುರ್ಮುಖರಾಜನು ಕ್ರೋಧಾರ್ತಧ್ವನಿಯಿಂದ, "ಏನಿದು ಅವಮಾನ! ನಾನು ಸಹಿಸಲಾರೆ! ಯಾರಿವರು? ಎಲ್ಲಿದ್ದೀಯೋ ಅಂಗರಕ್ಷಕಾ! ನಿನ್ನನ್ನೇನು ಮಾಡುತ್ತೇನೆ ನೋಡು!" ಎಂದು ಕೂಗಿದನು. ಆ ಕೂಗು ಅಂಗರಕ್ಷಕನನ್ನು ಇನ್ನಿಷ್ಟು ನಡುಗಿಸಿತು.

ಅದನ್ನು ಕೇಳಿ ನಾಗಮಲ್ಲ ಕಳ್ಳ, ಕತ್ತಿ ಝಳಪಿಸುತ್ತಾ "ಓಹ್ಹೋ! ನೀನು ಅವನ ಅಂಗರಕ್ಷಕನೇನು? ಹಾಗಾದರೆ ಅವನು ಸಾಮಾನ್ಯನಲ್ಲ. ಎಂಥವನಿಗೆ ಅಂಗರಕ್ಷಕ ನೀನು? ಕುದುರೆಯಿಂದಿಳಿದು ಎಲ್ಲಾ ಹೇಳು" ಎಂದು ಅಂಗರಕ್ಷಕನನ್ನು ಕುದುರೆಯಿಂದ ಎಳೆದನು.

ಆಗ ಮರದ ಕೊಂಬೆಯಲ್ಲಿದ್ದ ಕಳ್ಳನು ದುರ್ಮುಖರಾಜನನ್ನು ಇನ್ನೂ ಮೇಲಕ್ಕೆಳೆಯಲು ಕಷ್ಟಪಡುತ್ತಿರುವುದನ್ನು ನೋಡಿ ನಾಗಮಲ್ಲನು, "ಲೋ! ಅವನನ್ನು ಬಿಟ್ಟುಬಿಡಬೇಡ. ಹೇರಳ ಸಂಪತ್ತಿನ ಜೀವಗಳೇ ಸಿಕ್ಕಿದಂತಿವೆ. ಅವನ ಪಟ್ಟೆದುಸ್ತುಗಳಿಗೆ ಘಾಸಿಯಾಗದಂತೆ ಜಾಗರೂಕತೆಯಿಂದ ನೆಲದ ಮೇಲಕ್ಕೆ ಇಳಿಸು ನೋಡುವಾ" ಎಂದು ಅಪ್ಪಣೆ ಮಾಡಿದನು.

ಕೊಂಬೆಯಲ್ಲಿಯ ಕಳ್ಳನು ದುರ್ಮುಖರಾಜನನ್ನು ಮೆಲ್ಲಗೆ ನಲದ ಮೇಲಕ್ಕೆ ಇಳಿಸಿದನು. ಆ ಕೂಡಲೇ ದುರ್ಮುಖನು ತನ್ನ ಸೊಂಟಕ್ಕೆ ಬಿಗಿದಿದ್ದ ಹಗ್ಗವನ್ನು ಬಿಚ್ಚಲು ನೋಡಿದನು.

ಆಗ ನಾಗಮಲ್ಲನ ಸಹಚರನಾದ ಇನ್ನೊಬ್ಬ ಕಳ್ಳ ದುರ್ಮುಖನ ಬಳಿಗೆ ಬಂದು, "ಏನು ಮಾಡುವಿ? ಸೊಂಟದ ಹಗ್ಗವನ್ನು ಬಿಚ್ಚಿ ಕುತ್ತಿಗೆಗೆ ಹಾಕಿಕೊಳ್ಳುವಿಯೇನು? ಅವಸರಪಡಬೇಡ. ನೀನು ಯಾರೆಂದು ನಿಜವನ್ನು ಹೇಳದೇ ಹೋದರೆ ಆ ಕೆಲಸ

ನಾವೇ ಮಾಡುತ್ತೇವೆ. ಸುಮ್ಮನೆ ನಿಲ್ಲು ಕೈ ಕಟ್ಟಿಕೊಂಡು" ಎಂದನು ಚೋರನಿಂದ.

ಅಷ್ಟರಲ್ಲಿ ಮರದ ಮೇಲಿದ್ದ ಕಳ್ಳನೂ ಕೆಳಗೆ ಬಂದನು. ನಾಗಮಲ್ಲನು ದುರ್ಮುಖರಾಜನನ್ನು ನಖಶಿಖಾಂತವಾಗಿ ಪರೀಕ್ಷಿಸುತ್ತ, "ನಿನ್ನ ಬೆಲೆ ಬಾಳುವ ದುಸ್ತುಗಳು, ಶ್ರೇಷ್ಠವಾದ ಕತ್ತಿಯು ಒರೆ ಮುಂತಾದ್ದೆಲ್ಲಾ ನೋಡಿದರೆ ತುಂಬಾ ಧನಸಂಪನ್ನನಂತೆ ಕಾಣುವಿ. ಈಗ ನೀನಾಗಿ ನಿನ್ನ ಹತ್ತಿರವಿರುವ ಧನವನ್ನೆಲ್ಲಾ ಕೆಳಗಿಟ್ಟು, ಆಮೇಲೆ ನಿನ್ನ ಅಂಗರಕ್ಷಕನನ್ನು ಮನೆಗೆ ಕಳಿಸಿ ಹತ್ತು ಸಾವಿರ ವರಹಗಳನ್ನು ತರಿಸಿಬಿಡು. ಹೀಗೆ ಮಾಡದೇ ಹೋದರೆ ನಿನ್ನ ಪ್ರಾಣ ಉಳಿಯುವುದಿಲ್ಲ. ನಿನ್ನ ಶವ ಅಲ್ಲಿ ಕಾಣುವ ಬೆಟ್ಟದ ಗುಹೆಯಲ್ಲಿರುವ ಹುಲಿಗಳಿಗೋ ತೋಳಗಳಿಗೋ ಆಹಾರವಾಗಿ ಹೋಗುತ್ತದೆ. ಜಾಗ್ರತೆ! ಅದುವರೆಗೂ ಕದುಲುವಂತಿಲ್ಲ ನೀನು!" ಎಂದನು.

ಈ ಮಾತುಗಳನ್ನು ಕೇಳುತ್ತಿರಲು, ತಾನು ದೊಡ್ಡ ಮುಳ್ಳುಗಳ ಮೆಳೆಯಲ್ಲಿ ಬಿದ್ದೆನೆಂದು ದುರ್ಮುಖನಿಗೆ ಗೊತ್ತಾಯಿತು. ತಾನು ಇಂತಹ ದೇಶದ ರಾಜನೆಂದು ಹೇಳಿಬಿಟ್ಟರೆ, ಈ ಚೋರನಾಯಕನು ತನ್ನ ತಲೆಯನ್ನು ತಟ್ಟನೆ ಕಡಿದು ಇನ್ನಷ್ಟು ದೊಡ್ಡ ಬಹುಮಾನ ಸಂಪಾದಿಸಲು, ತನ್ನ ಶತ್ರುವಾದ ಚಂದ್ರಶಿಲಾ ನಗರದ ಜಿತಕೇತು ರಾಜನಿಗೆ ತೋರಿಸಬಹುದು. ಅದರ ಬದಲಾಗಿ ತಾನೊಬ್ಬ ಧನಿಕ ವರ್ತಕನೆಂದು ಹೇಳಿದರೆ? ಆಗ ತನ್ನ ಅಂಗರಕ್ಷಕನ ಮೂಲಕ ಹತ್ತು ಸಾವಿರ ವರಹ ತರಿಸಿಕೊಡಬೇಕಾಗುತ್ತದಲ್ಲ! ಅಷ್ಟರೊಳಗೆ ತಾನು ಸುಳ್ಳು ಹೇಳಿದ ಸಂಗತಿ ಹೊರಗಾಗಿಬಿಟ್ಟರೆ ತನ್ನಗತಿ...?

ಹೀಗೆ ದುರ್ಮುಖ ರಾಜನು ಯೋಚಿಸುತ್ತಿರಲು, ಹೇಳಿದ ಮಾತಿಗೆ ಉತ್ತರ ಕೊಡದೆ ಮೂಕನಂತಿರುವವನನ್ನು ನೋಡಿ ನಾಗಮಲ್ಲನು ಹಲ್ಲು ಕಡಿಯುತ್ತ, "ಏನದು ದೊಡ್ಡ ಆಲೋಚನೆ? ನಮ್ಮ



ಕೈಯಿಂದ ಜಾರಿ ಕೊಳ್ಳುವಂಥ ಜಾಲವೇನಾದರೂ ಹೊಸೆಯುತ್ತಿರುವಿಯಾ?" ಎನ್ನುತ್ತ ಕತ್ತಿಯನ್ನು ಮೇಲೆತ್ತಿದನು.

"ಜಾಲ ಹೊಸೆಯಲು ಸಾಧ್ಯವಿಲ್ಲವೆಂದು ನಾನು ಬಲ್ಲೆನಪ್ಪಾ, ನೀನು ಕೇಳಿದ ಹತ್ತು ಸಾವಿರ ವರಹಗಳನ್ನು ಹೇಗೆ ತರಿಸುವುದೆಂದು ಆಲೋಚಿಸುತ್ತಿದ್ದೇನೆ. ನಾನೊಬ್ಬ ವರ್ತಕ. ಹೆಸರು ದುರ್ಜಯ ಶೆಟ್ಟಿ, ಉದಯಗಿರಿ ಪಟ್ಟಣದವನು. ಈಗಂತೂ ನನ್ನ ಹತ್ತಿರ ಚಿಕ್ಕಾಸು ಕೂಡಾ ಇಲ್ಲ," ಎಂದನು ದುರ್ಮುಖ ರಾಜ,

ಅವನ ಮಾತು ಕೇಳಿ ನಾಗಮಲ್ಲನು ಆಶ್ಚರ್ಯಪಡುತ್ತ, "ಇಷ್ಟೊಂದು ಬೆಲೆ ಬಾಳುವ ದುಸ್ತುಗಳನ್ನು ಧರಿಸಿ, ಅಂಗರಕ್ಷಕನನ್ನು ಕೂಡಾ ಜತೆಗಿಟ್ಟುಕೊಂಡು ಚಿಕ್ಕಾಸು ಕೂಡಾ ಇಲ್ಲದೆ ಕಾಡಿನಲ್ಲಿ ಪ್ರಯಾಣ ಮಾಡುವುದೆಂದರೇನು? ನಿನ್ನ ಮಾತನ್ನು ಕಣ್ಣು ಮುಚ್ಚಿ ನಂಬಬೇಕೆನ್ನುವಿಯಾ?" ಎಂದು



ಹೇಳಿ ಬದಿಯಲ್ಲಿದ್ದ ತನ್ನ ಸಹಚರರೊಂದಿಗೆ, "ಹುಂ, ಇವನು ಸಾಧಾರಣಕ್ಕೆ ಸತ್ಯವನ್ನು ಬಾಯಿಬಿಡುವವನಲ್ಲ. ಇವನ ಸೊಂಟದ ಕಟ್ಟನ್ನು ಬಿಚ್ಚಿ. ಕುತ್ತಿಗೆಗೆ ಬಿಗಿಯಿರಿ. ಇವನನ್ನು ಯಾವ ಕೊಂಬೆಗೆ ನೇತಾಡಿಸಿ ಕೊಲ್ಲಬೇಕೆಂಬುದನ್ನು ನಾನು ನೋಡಿ ಹೇಳುತ್ತೇನೆ" ಎಂದನು.

ನಾಗಮಲ್ಲನು ಸಮೀಪದಲ್ಲಿದ್ದ ಒಂದು ಬಲವಾದ ಮರದ ಕೊಂಬೆಯನ್ನು ನೋಡುತ್ತಿರಲು, ದೂರದಲ್ಲಿ ಆನೆಯ ಘೀಂಕಾರವೂ, ಅದರೊಂದಿಗೆ ಕರಡಿ ಕಟುಕ ನಾಯಕನ ಕರ್ಕಶ ಸ್ವರವೂ ಕೇಳಿಬಂದಿತು.

ಅದನ್ನು ಕೇಳಿ ದುರ್ಮುಖಿ ರಾಜನೂ ಅಂಗರಕ್ಷಕನೂ ಮಹಾ ಭಯದಿಂದ ನಡುಗಲು ತೊಡಗಿದರು. ಅಂಗರಕ್ಷಕನು ಆ ಕಡೆಗೇ ನೋಡುತ್ತ, "ಮಹಾರಾಜರೇ! ಆ ಕಟುಕ ಕರಡಿ ದಾರಿ ತಪ್ಪಿ ಬೇರೆ ಕಡೆಗೆ ಹೋಯಿತೆಂದುಕೊಂಡರೆ, ಇತ್ತಲೇ ಬರುತ್ತಾ ಇದೆಯಲ್ಲಾ! ಇನ್ನೇನು ಗತಿಯೋ ಮಹಾಪ್ರಭುಗಳೇ? ಅದೀಗ ನಮ್ಮೆಲ್ಲರನ್ನೂ ಜಜ್ಜಿ ಹಾಕಿ ಬಿಡುತ್ತದಲ್ಲಾ!" ಎಂದು ಕೂಗಿದನು.

ಇದನ್ನೆಲ್ಲ ಕೇಳಿ ಕಳ್ಳರನಾಯಕನಿಗೂ ಏನೇನೋ ತೋರತೊಡಗಿತು. ಅವನು ಬಾಯಿ ತೆರೆದು, ಕಣ್ಣುಗಳನ್ನು ತೇಲಬಿಟ್ಟು, ತನ್ನ ಅನುಚರರನ್ನು ನೋಡಿ, "ಕೇಳಿದಿರಾ ಇವರ ಮಾತು? ಇವನು ತನ್ನ ಹೆಸರು ದುರ್ಜಯ ಶೆಟ್ಟಿ ಅನ್ನುತ್ತಾನೆ. ಅವನು ಇವನನ್ನು ಮಹಾರಾಜಾ, ಪ್ರಭುಗಳೇ ಅನ್ನುತ್ತಾನೆ. ಇದಕ್ಕಿಂತ ವಿಚಿತ್ರವಾಗಿ ಕಟುಕಕರಡಿಯಂತೆ! ಅದು ಕಾಡಿನಲ್ಲಿ ದಾರಿ ತಪ್ಪೀತು ಎಂದುಕೊಂಡನಂತೆ! ಏನಿದೆಲ್ಲಾ?" ಎಂದು ಕತ್ತಿಯನ್ನು ಮೇಲೆತ್ತಿ, "ಏನು ಬೊಗಳುವಿರಿ? ಬುದ್ಧಿಗಿದ್ಧಿ ನೆಟ್ಟಗಿದೆಯೋ? ಹುಚ್ಚುಚ್ಚಾಗಿ ಹೇಳಿ ನಮ್ಮ ಬುದ್ಧಿ ಕೆಡಿಸ ಬೇಕೆಂದಿರುವಿರೇನು?" ಎಂದನು ಕಣ್ಣು ತಿರುಗಿಸುತ್ತ.

ದುರ್ಮುಖಿ ರಾಜನಿಗೆ ಏನೂ ತೋರದೆ ಬಾಯಿ ಒಣಗಿಹೋಯಿತು. ಏನು ಉತ್ತರ ಕೊಡುವುದೆಂದೇ ತೋರಲಿಲ್ಲ. ಆಗ ಆನೆಯ ಘೀಂಕಾರವೂ ಇನ್ನಷ್ಟು ಸಮೀಪದಲ್ಲಿ ಕೇಳಿಸಿತು. ಅದರೊಂದಿಗೆ ಕಟುಕ ಕರಡಿಯ ಗರ್ಜನೆಯೂ ಹೊರಟಿತು. ಈಗ ನಾಗಮಲ್ಲನೂ ಸ್ವಲ್ಪ ಹೆದರುತ್ತ ತನ್ನ ಸಹಚನೊಬ್ಬನನ್ನು ನೋಡಿ, "ಲೋ, ನೀನು ಮರಹತ್ತಿ ನೋಡು. ಒಂದೇಬಾರಿಗೆ ಆನೆಯ ಘೀಂಕಾರ ಮತ್ತು ಕರಡಿಯ ಕೂಗಿನಂತಹ ಮನುಷ್ಯನ ಶಬ್ದ ಕೇಳಿ ಬರುವುದೆಂದರೆ ಹೇಗೆ ಸಾಧ್ಯ? ಇವರ ಮಾತಿನಲ್ಲಿ ಎಷ್ಟು ನಿಜವೋ ಎಷ್ಟು ಸುಳ್ಳೋ. ಬೇಗ ನೋಡಿ ಹೇಳು" ಎಂದು ಆಜ್ಞೆ ಮಾಡಿದನು.

ಕಳ್ಳರಲ್ಲೊಬ್ಬನು ಬೇಗಬೇಗನೆ ಮರವನ್ನು ಹತ್ತಿ, ನೋಡಿದವನೇ ಕೆಟ್ಟ ದನಿಯಿಂದೊಮ್ಮೆ ಕೂಗಿ, "ನಾಗಮಲ್ಲಾ! ಆ ದುರ್ಜಯ ಶೆಟ್ಟಿಯೂ ಅವನ ನೌಕರನೂ ಹೇಳಿದ ಮಾತು ನಿಜ. ತುಂಡಾಗಿ ನೇತಾಡುತ್ತಿರುವ ಅರ್ಧಸೊಂಡಿಲಿನ ಆನೆಯೊಂದು

ಬರುತ್ತಿದೆ. ಅದರ ಮೇಲೆ ಚಪಗೊಡಲಿ ಹಿಡಿದು ಕೊಂಡಿದ್ದ ಮನುಷ್ಯ ಕರಡಿಯೂ ಇದೆ. ಅಯ್ಯಯ್ಯೋ! ಅಡ್ಡ ಬಂದ ಮರದ ಕೊಂಬೆಗಳೆಲ್ಲಾ ಅವನ ಚಪ ಗೊಡಲಿಯ ಹೊಡೆತಕ್ಕೆ ಕಡ್ಡಿಗಳು ಮುರಿದು ಬೀಳುವ ಹಾಗೆ ಚೆಲ್ಲಾ ಚೆದರಾಗಿ ಬೀಳುತ್ತಿವೆ!" ಎಂದನು ನಡುಗುತ್ತ.

ನಾಗಮಲ್ಲನು ಭಯಾಶ್ಚರ್ಯಗಳಿಂದ ದಿಕ್ಕು ಗಳನ್ನು ನೋಡುತ್ತ, ಈಗೇನು ಮಾಡುವುದೆಂದು ಆಲೋಚಿಸುವಾಗ, ದುರ್ಮುಖರಾಜನು ಅವನಿಗಿಂತ ಹೆಚ್ಚಿನ ಭಯದಿಂದ ಅವನ ಕೈಯನ್ನು ಹಿಡಿದು, "ಈಗ ನಿಮಗೂ ನಮಗೂ ಗಂಡಾಂತರವೇ ಸರಿ! ನಾವಿಲ್ಲಿಂದ ಬೇಗನೇ ಓಡದಿದ್ದರೆ ಕೆಡುತ್ತೇವೆ. ಹಣಕ್ಕಾಗಿ ನೀನು ನಿನ್ನ ಜೀವವನ್ನೇ ಬಿಡುವೆಯೇನು? ಬೇಕಾದರೆ ನನ್ನ ಮನೆಯಲ್ಲಿದ್ದ ಹಣದಿಂದ ನಿನ ಗೊಂದು ರಾಜ್ಯವನ್ನೇ ತೆಗಿಸಿಕೊಟ್ಟೇನು!" ಎಂದನು ನಡುಗುತ್ತ.

ಅಂಗರಕ್ಷಕನು ಕುದುರೆಯ ಮೇಲೇರಿ ಓಡಿ ಹೋಗಲು ಪ್ರಯತ್ನಿಸುತ್ತ ಅದರ ಕಡಿವಾಣವನ್ನು ಹಿಡಿದು ನಾಗಮಲ್ಲನೊಂದಿಗೆ, "ಅಯ್ಯಾ ಮಲ್ಲಾ! ಈ ಕ್ಷಣದಲ್ಲಿ ನೀನು ಮಹಾರಾಜರ ಪ್ರಾಣವನ್ನು ಕಾಪಾಡಿದೆಯೆಂದರೆ ಅವರು ನಿನಗೆ ಅರ್ಧ ರಾಜ್ಯ ವನ್ನೇ ಧಾರೆಯೆರೆದು ಕೊಡುತ್ತಾರೆ. ನಾನು ಕುದುರೇ ಮೇಲೆ ವಾಯುವೇಗದಿಂದ ರಾಜಧಾನಿಗೆ ಹೋಗಿ ಒಂದು ಸೈನ್ಯವನ್ನೇ ತೆಗೆದುಕೊಂಡು ಬಂದು ಬಿಡು ತ್ತೇನೆ. ಆಗದೇ ಮಹಾರಾಜರೇ? ಹೋಗಿ ಬರಲಾ?" ಎಂದನು.

"ಆ ಕೆಲಸ ನಾನೇ ಮಾಡುವುದೊಳ್ಳೆಯದು. ಆದರೆ ಈಗ ರಾಜಧಾನಿಗೆ ಹೋಗುವ ಮಾರ್ಗವೋ ದಿಕ್ಕೋ ಒಂದೂ ತಿಳಿಯುವುದಿಲ್ಲವಲ್ಲಾ!" ಎಂದು ದುರ್ಮುಖ ರಾಜನು ಕುದುರೆಯ ಕಡಿವಾಣವನ್ನು ತಾನು ಹಿಡಿದುಕೊಂಡನು.



ನಾಗಮಲ್ಲನು ತನ್ನ ಅನುಚರರನ್ನು ನೋಡಿ ಕಣ್ಣು ಹಾರಿಸಿ, ದುರ್ಮುಖ ರಾಜ ಮತ್ತು ಅಂಗ ರಕ್ಷಕರನ್ನು ಅಡ್ಡಗಟ್ಟಿ ನಿಂತು ಕಣ್ಣು ತಿರುಗಿಸಿ ಹೆದರಿ ಸುತ್ತ, "ಇಬ್ಬರೂ ಓಡಲಿಕ್ಕೋ ನೋಡುವಿರಿ? ನಿಮಗೆ ಬುದ್ಧಿಗಿದ್ದಿ ಇದೆಯೋ ಅಥವಾ ಭಾರೀ ಬುದ್ಧಿವಂತಿಕೆಯ ಮೋಸಗಾರರೋ? ಅಲ್ಲಿ ನೀವೇ ಹೇಳುವ ಆ ಗಂಡಾಂತರಗಳು ಮೇಲೆ ಬಂದು ಬೀಳಲಿರುವಾಗ, ಎಲ್ಲಿಯೋ ಇರುವ ರಾಜಧಾನಿಗೆ ಹೋಗಿ ಸೈನ್ಯವನ್ನು ತರುವುದೆಂದರೇನರ್ಥ?" ಎಂದು ಕೇಳಿದನು.

"ಅರ್ಥವೆಲ್ಲ ಮತ್ತೆ ಗೊತ್ತಾದರೆ ಸಾಲದೆ? ಮೊದಲು ಗಂಡಾಂತರದಿಂದ ಪಾರಾಗಬೇಕು" ಎಂದ ಅಂಗರಕ್ಷಕ.

ನಾಗಮಲ್ಲನು ತನ್ನ ಅನುಚರರನ್ನು ನೋಡಿ, "ಈ ಭಲೇ ಆಸಾಮಿಗಳನ್ನು ಹಗ್ಗದಿಂದ ಕಟ್ಟಿ ಅಲ್ಲಿ ಕಾಣುವ ಬೆಟ್ಟದ ಗುಹೆಯ ಕಡೆಗೆ ಎಳೆದುಕೊಂಡು



ನಡೆಯಿರಿ. ಆ ಕಟುಕಕರಡಿಗಿರಡಿ ಆನೆಗೀನೆ ಎಲ್ಲಾ ಈ ಪ್ರಾಂತದಿಂದ ಹೋದ ಮೇಲೆ ಇವರು ಯಾರು ಏನೆಂಬ ನಿಜವನ್ನು ತಿಳಿದುಕೊಳ್ಳೋಣ. ಒಳ್ಳೇ ಗಿರಾಕಿ ಗಂಟು ಬಿತ್ತು ಇವತ್ತು !" ಎಂದನು.

ಹೀಗೆ ಹೇಳಿ ನಾಗಮಲ್ಲನು ಹೊರಟನು. ಅವನ ಸಹಚರರು ದುರ್ಮುಖರಾಜನನ್ನೂ, ಅಂಗರಕ್ಷಕನನ್ನೂ ಹಗ್ಗದಿಂದ ಕಟ್ಟಿ ಎಳೆದುಕೊಂಡು ಸಾಗಿದರು. ಅವರಿಬ್ಬರ ಉರುಳಾಟ ಯಾವುದೂ ಆ ಕಳ್ಳರ ಮುಂದೆ ನಡೆಯಲಿಲ್ಲ.

ಅವರು ದೊಡ್ಡದೊಂದು ಗುಹೆಯನ್ನು ಸಮೀಪಿಸುವಷ್ಟರಲ್ಲಿ ಕರಡಿಯಾದ ಕಟುಕನಾಯಕನು ಮರಗಳ ಗುಂಪಿನಿಂದ ಆನೆಯ ಮೇಲೇರಿಕೊಂಡು ಅಲ್ಲಿಗೇ ಬಂದು ದುರ್ಮುಖರಾಜನನ್ನು ನೋಡಿ, "ಸಿಕ್ಕಿದೆಯಾ ದುಷ್ಟಾ ! ಇನ್ನು ನೀನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ನಿನ್ನನ್ನೀಗಲೇ ನನ್ನ ಚಪಗೊಡಲಿಗೆ ಬಲಿ ಹಾಕಿಬಿಡುತ್ತೇನೆ" ಎಂದು ಕೂಗುತ್ತ ಆನೆಯ ಮೇಲಿನಿಂದ ಕೆಳಗೆ ಧುಮುಕಿ. ಅವರನ್ನು ಓಡಿಸಿಕೊಂಡು ಬರತೊಡಗಿದನು.

ನಾಗಮಲ್ಲನೇ ಮೊದಲಾದವರು ಹೆದರಿ ಓಡೋಡುತ್ತಾ ಹೋಗಿ ಒಂದು ಗುಹೆಯೊಳಗೆ ಗಬಗಬನೆ ನುಗ್ಗಿದರು. ಕಟುಕಕರಡಿ ಆ ಗುಹೆಯನ್ನು ಸಮೀಪಿಸುವುದರೊಳಗೆ, ಕಳ್ಳರು ಗುಹೆಯ ಬಾಯಿಗೆ ದೊಡ್ಡದೊಂದು ಕಲ್ಲನ್ನು ಅಡ್ಡವಿಟ್ಟುಬಿಟ್ಟರು. ಆದರೂ ಗುಹೆಯೊಳಗಿದ್ದವರೆಲ್ಲ ಹೆದರಿ ಗಡಗಡನೆ ನಡುಗುತ್ತಿದ್ದಾರೆ.

ಕಟುಕಕರಡಿಗಾರ ಗುಹೆಯ ಬಾಯಿಯ ಬಂಡೆಯನ್ನು ಕಾಲಿನಿಂದ ತುಳಿಯುತ್ತ, "ಒಳ್ಳೆಯ ಮಾತಿನಲ್ಲಿ ಗುಹೆಯೊಳಗಿನವರೆಲ್ಲ ಹೊರಗೆ ಬನ್ನಿ. ನನಗೆ ಬೇಕಾದ್ದು ದುಷ್ಟದುರ್ಮುಖರಾಜನ ತಲೆ ಮಾತ್ರ. ಉಳಿದವರಿಗೆ ಯಾವ ಭಯವೂ ಇಲ್ಲ," ಎಂದು ಕೂಗಿ ಹೇಳಿದನು.

ಆ ಕೂಗನ್ನು ಕೇಳಿ ನಾಗಮಲ್ಲನು ತನ್ನ ಇಬ್ಬರು ಅನುಚರರೊಂದಿಗೆ, "ಭೇಷ್ ಭೇಷ್ ! ಇದು ಇನ್ನೂ ಚೆನ್ನಾಗಿದೆ. ಆ ಪಿಶಾಚಿಯಂಥ ಕರಡಿಮನುಷ್ಯನಿಗೆ ಬೇಕಾದ್ದು ದುರ್ಮುಖರಾಜನ ತಲೆಯಂತೆ. ಯಾರು ಆ ದುರ್ಮುಖರಾಜ ? ಎಲ್ಲಿದ್ದಾನೆ ? ತಲೆ ಬಾಲ ತಿಳಿಯದ ಎಂಥ ಕಥೆಯಿದು ?" ಎಂದು ಹೇಳಿ ದುರ್ಮುಖರಾಜನನ್ನು ನೋಡಿ, "ದುರ್ಮುಖರಾಜನೆಂದರೆ ಇಲ್ಲಿಗೆ ಸಮೀಪದಲ್ಲಿರುವ ಉದಯಗಿರಿ ರಾಜ್ಯವನ್ನು ಆಳುವವನು. ನಾನು ಅರಣ್ಯವನ್ನು ಬಿಟ್ಟು ನಗರದ ವಿಚಿತ್ರನೋಡಲು ಹೋಗುವವನೇ ಅಲ್ಲ. ಆ ರಾಜನನ್ನು ನೋಡಿದವನೂ ಅಲ್ಲ. ಆದರೆ ಅವನ ಆಳಿಕೆಯ ಪ್ರಜಾಪೀಡಕತನವನ್ನು ತುಂಬಾ ಕೇಳಿದ್ದೇನೆ. ಅವನ ಮೇಲೆ ಈ ವಿಚಿತ್ರ ಪ್ರಾಣಿಗೆ ಏಕೆ ಇಷ್ಟು ಕೋಪವೋ ? ಒಂದು ವೇಳೆ ನೀನೇ ಆ ದುರ್ಮುಖರಾಜ ಅಲ್ಲವಷ್ಟೆ ?" ಎಂದನು ಪರೀಕ್ಷಿಸಿ ನೋಡುತ್ತಾ.

"ಇದೊಳ್ಳೇ ಪೇಚಾಟವಾಯಿತಲ್ಲ. ನಾನು ದುರ್ಜಯಶೆಟ್ಟಿ. ಉದಯಗಿರಿ ನಗರದವನೆಂದು ಮೊದಲೇ ಹೇಳಿದ್ದೇನೆ. ಯಾವುದೋ ಪಿಶಾಚಾ ವೇಶದಲ್ಲಿರುವ ಕರಡಿಮನುಷ್ಯನ ಮಾತು ಕೇಳಿ ನನ್ನ ಮೇಲೆ ಸಂದೇಹಪಡಬೇಡ. ನಾವು ಕ್ಷೇಮವಾಗಿ ಇಲ್ಲಿಂದ ಪಾರಾಗುವ ಮಾರ್ಗವಿದ್ದರೆ ನೋಡಪ್ಪ. ನೀನು ಕೇಳಿದ ಹತ್ತು ಸಾವಿರ ವರಹ ಕೊಟ್ಟುಬಿಡುತ್ತೇನೆ. ಅಲ್ಲಾ ಸ್ವಲ್ಪ ಹೆಚ್ಚು ಬೇಕಾದರೂ ಕೇಳಿಕೋ. ಕೊಡುತ್ತೇನೆ" ಎಂದ ದುರ್ಮುಖ ದೀನನಾಗಿ.

"ನಮ್ಮ ಮಹಾರಾಜರು ಹೇಳಿದ ಮಾತು ಈವರೆಗೂ ತಪ್ಪಿದವರಲ್ಲ" ಎಂದನು ಅಂಗರಕ್ಷಕ. ಅದನ್ನು ಕೇಳಿ ದುರ್ಮುಖರಾಜನು ಕೋಪದಿಂದ, "ಛೀ ಮೂರ್ಖ! ನಿನಗೂ ಏನೋ ಪಿಶಾಚಿ ಹಿಡಿಯಿತೇನು? ಈ ಅರಣ್ಯದಲ್ಲಿ ಹೊಕ್ಕಕ್ಷಣದಿಂದ ನೋಡುತ್ತಿದ್ದೇನೆ. ಸುಮ್ಮಸುಮ್ಮನೆ ನನ್ನನ್ನು ಮಹಾರಾಜಾ ಮಹಾರಾಜಾ ಅಂತ ಹೇಳುತ್ತಿರುವೆಯಲ್ಲ? ಇನ್ನು ಹಾಗೆಂದರೆ ಬಹಿರಂಗ ಶಿರಚ್ಛೇದ ಶಿಕ್ಷೆ ವಿಧಿಸುತ್ತೇನೆ! ಎಚ್ಚರಿಕೆ!" ಎಂದನು.

ನಾಗಮಲ್ಲನಿಗೆ ಧಿಗ್ಗೆನಿಸಿತು. ಅವನು ತನ್ನ ಅನುಚರರೊಂದಿಗೆ ಮೆಲ್ಲನೆಯಿಂದ, "ಎಲೋ! ನಾವು ಅದೃಷ್ಟದಿಂದಲೋ ದುರದೃಷ್ಟದಿಂದಲೋ ಉದಯಗಿರಿರಾಜ ದುರ್ಮುಖನನ್ನೇ ಹಿಡಿದ ಹಾಗಿದೆ. ರಾಜನ ಹೊರತು ಮತ್ತಾರಿಗಾದರೂ ಬಹಿರಂಗ ಶಿರಚ್ಛೇದ ಶಿಕ್ಷೆ ಕೊಡುವ ಹಕ್ಕು ಇರುವುದುಂಟೆ? ಈ ದುರ್ಜಯಶೆಟ್ಟಿ ಎಂಬವನು ಹೆದರಿ ಬಾಯಿ ಜಾರಿ ತಾನು ಯಾರೆಂಬುದನ್ನು ಹೇಳಿಬಿಟ್ಟಿರಬೇಕು" ಎಂದನು.

ದುರ್ಮುಖರಾಜನಿಗೆ ಈಗ ಎರಡು ಬಗೆಯ ಭಯ ಹಿಡಿಯಿತು. ಒಳಗಿರುವ ಕಳ್ಳರು ತನ್ನನ್ನೇನು ಮಾಡುವರೋ ಎಂಬ ಭಯದೊಂದಿಗೆ, ಗುಹೆಯ ಬಾಯಿಯ ಕಲ್ಲನ್ನು ಒದ್ದು ಉರುಳಿಸಲು ನೋಡುವ




ಕರಡಿಯಾದ ಕಟುಕನಾಯಕನ ಭಯ ಬೇರೆ ಸೇರಿಕೊಂಡಿತು. ಆ ಕಲ್ಲು ಯಾವ ಕ್ಷಣಕ್ಕೂ ಉರುಳೀತು!

ಅವನು ಏನೋ ಎಚ್ಚರಿಕೆ ಕೊಡುವವನಂತೆ ಪಕ್ಕದಲ್ಲಿದ್ದ ತನ್ನ ಅಂಗರಕ್ಷಕನನ್ನು ಮೊಣಕೈಯಿಂದ ತಿವಿದು, ಚೋರನಾಯಕನನ್ನು ನೋಡಿ, "ನಾಗಮಲ್ಲಾ, ನನ್ನನ್ನು ಕುರಿತು ನೀನು ಏನೋ ಭ್ರಮೆಯಲ್ಲಿ ಬಿದ್ದಹಾಗಿದೆ. ನಾನು ಸತ್ಯವಾಗಿಯೂ ದುರ್ಜಯಶೆಟ್ಟಿಯೇ. ನೆನಪಿಟ್ಟುಕೋ. ಈ ಭಯಂಕರವಾದ ಅರಣ್ಯಕ್ಕೆ ಸೇರಿದ ಹೊತ್ತಿನಿಂದ ನನ್ನ ನೌಕರನು ಬುದ್ಧಿ ಕೆಟ್ಟು ಹುಚ್ಚನ ಹಾಗೆ ಬೊಗಳುತ್ತಿದ್ದಾನೆ. ಇವನನ್ನು ಯಾವುದೋ ದುಷ್ಟಗ್ರಹವು ಹಿಡಿದುಬಿಟ್ಟಿದೆ" ಎಂದನು.

"ಹೌದೌದು ಮಹಾರಾಜರೇ. ನಿಮ್ಮ ಊಹೆ ನಿಜವೇ. ಅದೊಂದು ಹುಚ್ಚುಗ್ರಹವೇ!" ಎಂದು ಅಂಗರಕ್ಷಕನು ನರಳುವ ಸ್ವರದಲ್ಲಿ ಹೇಳಿದನು. ನಾಗಮಲ್ಲನು ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು,

"ಆದೇನಾದರೂ ಈಗೇನಿಲ್ಲ. ನೀನು ರಾಜನಾದರೂ ಶೆಟ್ಟಿಯಾದರೂ ಈಗೇನೂ ಮಾಡುವಂತಿಲ್ಲ. ಆ ಭಯಂಕರವಾದ ಕರಡಿ ಗುಹೆಯ ಕಲ್ಲನ್ನು ಎಬ್ಬಿಸಿ ಹಾಕಿ ಒಳಗೆ ನುಗ್ಗಿ ನಮ್ಮೆಲ್ಲರ ತಲೆಗಳನ್ನು ಚಪ ಗೊಡಲಿಯಿಂದ ಕಡಿದುಹಾಕುತ್ತದೆ" ಎಂದು ಹೇಳಿ ತನ್ನ ಅನುಚರರನ್ನು ನೋಡಿ, "ಎಲೋ. ಹೇಗೂ ನಾವು ಸಾಯುವುದಂತೂ ನಿಜ. ನಾವೇ ಮುಂದಾಗಿ ಗುಹೆಯ ಕಲ್ಲನ್ನು ಆಚೆಗೆ ಉರುಳಿಸಿ, ಕತ್ತಿಗಳೊಂದಿಗೆ ಆ ಮನುಷ್ಯ ಕರಡೀ ಮೇಲೆ ಬಿದ್ದರೆ ಹೇಗಿದ್ದೀತು ?" ಎಂದು ಕೇಳಿದನು.

ಕಳ್ಳರಿಬ್ಬರೂ ಅವನಿಗೆ ಪ್ರತ್ಯುತ್ತರ ಕೊಡುವುದ ರೊಳಗೆ ಅಂಗರಕ್ಷಕನು ಮಾತು ತೂರಿಸುತ್ತ, "ನಾಗ ಮಲ್ಲಾ, ಅದು ಸಾಮಾನ್ಯ ಮನುಷ್ಯ ಕರಡಿಯಲ್ಲ, ಕಟುಕನಾಯಕ ಕ ರ ಡಿ ! ಕರಡಿಕಿಂಗಣ್ಣ ಮಹಾ ಮಾಂತ್ರಿಕ ಸೃಷ್ಟಿಸಿದ್ದು ! ಆದರ ಬಲವು ರಾಕ್ಷಸನ ಬಲವೇ. ನಾವು ಮಾತಾಡದೆ ಈ ಗುಹೆಯೊಳಗೆ ಇದ್ದು ಬಿಡುವುದೇ ಕ್ಷೇಮ" ಎಂದನು.

ಅಷ್ಟರಲ್ಲೇ ಕಟುಕ ಕರಡಿ ಗುಹೆಯ ಬಾಯಿಯ ಕಲ್ಲನ್ನು ಎರಡು ಕೈಗಳಿಂಲೂ ಹಿಡಿದು ಎತ್ತಿ, ಗುಹೆ ಯೊಳಗೆ ಬಗ್ಗಿ ನೋಡುತ್ತ, "ಎಲವೋ ದುರ್ಮುಖ ರಾಜಾ, ನಿನ್ನ ತಲೆಯನ್ನು ಹೀಗೆ ಚಾಚು, ಅದನ್ನು ಕಡಿದು ತೆಗೆದುಕೊಂಡು ನನ್ನ ದಾರಿಯಲ್ಲಿ ಹೋಗು ತ್ತೇನೆ. ನಿನ್ನ ಮುಂಡಗಿಂಡ ನನಗೆ ಬೇಡ." ಎಂದಿತು.

"ಓಹ್ ! ಚೆನ್ನಾಗಿದೆ ಇದರ ಕೋಪವೆಲ್ಲಾ ದುರ್ಮುಖ ರಾಜನೊಬ್ಬನ ಮೇಲೆಯೇ ಎಂದಾ ಯಿತು. ನಮಗೇನೂ ಭಯವಿಲ್ಲ. ದುರ್ಜಯ ಶೆಟ್ಟಿಯೆನ್ನುವ ಇವನನ್ನೇ ದುರ್ಮುಖ ರಾಜನೆಂದು ಕರೆಯುತ್ತದೆ. ಇವನನ್ನು ಹಿಡಿದು ಗುಹೆಯ ಹೊರಗೆ ದೂಡಿರಿ" ಎಂದು ಚೋರ ನಾಯಕನು ತನ್ನ ಅನು ಚರರಿಗೆ ಹೇಳಿದನು.

ಕಳ್ಳರಿಬ್ಬರೂ ದುರ್ಮುಖ ರಾಜನ ತೋಳು ಗಳನ್ನು ಹಿಡಿದು ಗುಹೆಯ ಹೊರಗೆ ತಳ್ಳಲು ಹೆಣ ಗುತ್ತಿರಲು, ಅವನೂ ತುಳ್ಳಾಡಿಕೊಂಡು ಪ್ರತಿಭಟಿ ಸುತ್ತಿರಲು, ಆ ಗುಹೆಗೆ ತುಸು ದೂರದಿಂದ ಒಂದು ಗಡುಸುದನಿ ಹೊರಟಿತು: "ಏನಿದು ಗಲಭೆ ? ಆಗಿ ನಿಂದ ನೋಡುತ್ತಾ ಇದ್ದೇನೆ. ಪಕ್ಕದ ಗುಹೆಯಲ್ಲಿ ಈ ಉಗ್ರದಂಡನೆಂಬ ಮಹಾ ರಾಕ್ಷಸನಿರುವ ಸಂಗತಿ ಮರೆತಿರೇನು ?"

ಅದಕ್ಕೆ ಉತ್ತರವಾಗಿ ಕಟುಕಕರಡಿ, "ಏನು ? ನೀನು ರಾಕ್ಷಸನೇ ? ನಿನ್ನ ಹೆಸರು ಉಗ್ರದಂಡನೇ ? ಬಾಬಾ ! ಕರಡಿಕಿಂಗಣ್ಣ ಗುರುವಿನ ಮಂತ್ರದಂಡದ ಶಕ್ತಿ ಪಡೆದ ಈ ಚಪಗೊಡಲಿ ನಿನ್ನ ಕಂಠವನ್ನೂ ಕಡಿಯಬಲ್ಲುದು" ಎನ್ನುತ್ತ ಆ ರಾಕ್ಷಸನ ಕಡಗೇ ಧಾವಿಸಿತು.

